# ಸಾಮಾಜಿಕ ನ್ಯಾಯ

ಮತ್ತು

# ಇಸ್ಲಾಮ್

✍ ಮೌಲಾನ ವಹೀದುದ್ದೀನ್ ಖಾನ್

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

## ಪ್ರಕಾಶಕರ ಮಾತು

ಸಾಮಾಜಿಕ ನ್ಯಾಯದ ಕುರಿತು ಉಪ ಭೂಖಂಡದ ಖ್ಯಾತ ವಿದ್ವಾಂಸರಾದ ಮೌ| ವಹೀದುದ್ದೀನ್ ಖಾನ್ ಉರ್ದು ಭಾಷೆಯಲ್ಲಿ ರಚಿಸಿದ ಒಂದು ಪ್ರೌಢ ಪ್ರಬಂಧದ ಕನ್ನಡಾನುವಾದವೇ ಈ ಕೃತಿ. ಇದು ಅದರ ಎರಡನೇ ಆವೃತ್ತಿಯಾಗಿದೆ.

ಸಾಮಾಜಿಕ ನ್ಯಾಯದ ಮಹತ್ವವನ್ನು ಈ ಕಿರು ಹೊತ್ತಗೆಯಲ್ಲಿ ವಸ್ತುನಿಷ್ಠವಾಗಿ ಪ್ರತಿಪಾದಿಸಲಾಗಿದೆ. ಜೊತೆಗೆ ವಿವಿಧ ಕಾಲ, ಜನಾಂಗ ಹಾಗೂ ಭೌಗೋಳಿಕ ಹಿನ್ನೆಲೆಯಲ್ಲಿ ಸಾಮಾಜಿಕ ನ್ಯಾಯದ ಬಗ್ಗೆ ಜನರಲ್ಲಿದ್ದ ವಿವಿಧ ಭಾವನೆಗಳನ್ನು ಇದರಲ್ಲಿ ವಿವರಿಸಲಾಗಿದೆ. ಸಾಮಾಜಿಕ ನ್ಯಾಯದ ಕುರಿತು ಬೇರೆ ಬೇರೆ ಧರ್ಮಗಳ ಕಲ್ಪನೆಯನ್ನೂ ತುಲನಾತ್ಮಕವಾಗಿ ಇದರಲ್ಲಿ ಚರ್ಚಿಸಲಾಗಿದೆ. ಇಸ್ಲಾಮ್ ಧರ್ಮವು ಸಾಮಾಜಿಕ ನ್ಯಾಯಕ್ಕೆ ಎಷ್ಟೊಂದು ಮಹತ್ವವನ್ನು ಕಲ್ಪಿಸಿದೆ. ಇಸ್ಲಾಮ್ ಧರ್ಮವು ಸಾಮಾಜಿಕ ನ್ಯಾಯದ ಕೇವಲ ಕಲ್ಪನೆಯನ್ನು ನೀಡಿರುವುದಲ್ಲ; ಅದನ್ನು ಆಚರಣೆಗೆ ತಂದು ತೋರಿಸಿದೆ. ಅದರ ಐತಿಹಾಸಿಕ ಉದಾಹರಣೆಗಳನ್ನು ಇದರಲ್ಲಿ ಕೊಡಲಾಗಿದೆ. ಸಾಮಾಜಿಕ ನ್ಯಾಯದ ಸರಿಯಾದ ಪ್ರಜ್ಞೆ ಜನಮನದಲ್ಲಿ ಮೂಡಿಸಲು ಈ ಕೃತಿ ಸಹಕಾರಿಯಾಗಲೆಂದು ಹಾರೈಸುತ್ತೇವೆ.

ಶಾಂತಿ ಪ್ರಕಾಶನ

# ಅನುಕ್ರಮಣಿಕೆ

# ಸಾಮಾಜಿಕ ನ್ಯಾಯ ಮತ್ತು ಇಸ್ಲಾಮ್

## ಅಸಮಾನತೆಯ ಕಲ್ಪನೆ-ಹುಟ್ಟು, ಬೆಳವಣಿಗೆ

**ಸಾ**ಮಾಜಿಕ ನ್ಯಾಯ(Social Justice) ಎಂಬುದನ್ನು ಸರಳವಾಗಿ ಎಲ್ಲರಿಗೂ ಇರುವ ನ್ಯಾಯ (Justice for all) ಎನ್ನಬಹುದು. ಇಸ್ಲಾಮಿಗಿಂತ ಮೊದಲು ಮಾನವ ಸಮಾಜದಲ್ಲಿ ಈ ರೀತಿಯ ಸಮಾನವಾಗಿ ಅನ್ವಯವಾಗುವ ನ್ಯಾಯದ ಕಲ್ಪನೆ ವೈಚಾರಿಕವಾಗಿಯಾಗಲಿ, ವ್ಯಾವಹಾರಿಕವಾಗಿಯಾಗಲಿ ಇರಲಿಲ್ಲ ಎಂದರೆ ತಪ್ಪಾಗಲಾರದು. ಇತಿಹಾಸದಲ್ಲಿ ಮೊಟ್ಟಮೊದಲ ಬಾರಿ 'ಸಮಾನ ನ್ಯಾಯ'ವನ್ನು ಇಸ್ಲಾಮ್ ಸ್ಥಾಪಿಸಿತು. ಮುಸ್ಲಿಮೇತರ ಚಿಂತಕರೂ ಈ ವಾಸ್ತವಿಕತೆಯನ್ನು ಸಮ್ಮತಿಸಿದ್ದಾರೆ. ಉದಾಹರಣೆಗೆ ಸ್ವಾಮಿ ವಿವೇಕಾನಂದರು(1863-1902) ತಮ್ಮ ಪತ್ರದಲ್ಲಿ ಹೀಗೆಂದಿದ್ದಾರೆ.

"If ever any religion approached to this equality in any appreciable manner it is Islam and Islam alone." (ಪುಟ-379)

(ಯಾವುದಾದರೊಂದು ಧರ್ಮ ಸಮಾನತೆಯ ಸ್ತುತ್ಯ ಹಂತಕ್ಕೆ ತಲಪಿದ್ದರೆ ಅದು ಇಸ್ಲಾಮ್ ಆಗಿದೆ. ಇಸ್ಲಾಮ್ ಮಾತ್ರ)

ಈ ನಿಟ್ಟಿನಲ್ಲಿ ಇಸ್ಲಾಮ್ ನೀಡಿರುವ ಕೊಡುಗೆಗಳನ್ನು ಪ್ರಸ್ತಾಪಿಸುವುದಾದರೆ ಒಂದು ಗ್ರಂಥವನ್ನೇ ರಚಿಸಬೇಕಾದೀತು. ಆದರೂ ತಾತ್ವಿಕವಾಗಿ ಅದನ್ನು ಮೂರು ಅಧ್ಯಾಯಗಳಲ್ಲಿ ವಿಂಗಡಿಸಬಹುದು.

1) ಭ್ರಾತೃತ್ವ ಮತ್ತು ಸಮಾನ ನ್ಯಾಯದ ಬಗ್ಗೆ ಸಮಗ್ರ ಸಿದ್ಧಾಂತ ವೊಂದನ್ನು ಸಮರ್ಪಿಸುವುದು. ಅಂತಹ ಸಿದ್ಧಾಂತ ಅತ್ಯವಶ್ಯಕವಾಗಿದೆ. ಅಲ್ಲದೆ

ಆ ಸಿದ್ಧಾಂತ ವಾಸ್ತವಿಕ ಸ್ವರೂಪದ್ದೂ ಆಗಿರಬೇಕು. ಇಸ್ಲಾಮ್ ಈ ನಿಟ್ಟಿನಲ್ಲಿ ಸಮರ್ಪಿಸಿರುವ ಸಿದ್ಧಾಂತದಲ್ಲಿ ಈ ಎರಡೂ ಗುಣ ವಿಶೇಷತೆಗಳು ಪೂರ್ಣ ಮಟ್ಟದಲ್ಲಿವೆ.

2) ಈ ಸಿದ್ಧಾಂತವನ್ನು ಜೀವನದಲ್ಲಿ ಅಳವಡಿಸಲಿಕ್ಕಾಗಿ ಪ್ರಬಲ ಪ್ರೇರಣೆ(Incentive)ಯೊಂದನ್ನು ನೀಡುವುದು. ಅದು ಎಷ್ಟು ಶಕ್ತಿಯುತವಾದ ಪ್ರೇರಣೆಯಾಗಿರಬೇಕೆಂದರೆ ಸಮಾನತೆ ಪಾಲಿಸುವುದು ಮತ್ತು ನ್ಯಾಯ ಪರಿಪಾಲನೆ ಮಾಡುವುದು ವೈಯಕ್ತಿಕ ಅವಶ್ಯಕತೆಯಾಗಿ ಮಾರ್ಪಡಬೇಕು. ಅನಂತರ ಪ್ರತಿಯೊಬ್ಬ ವ್ಯಕ್ತಿ ತನ್ನ ಶ್ರೇಯಸ್ಸಿಗಾಗಿ ಅದನ್ನು ಅಂಗೀಕರಿಸಲು ನಿರ್ಬಂಧಿತನಾಗುತ್ತಾನೆ.

3) ಜೀವನದ ಪ್ರತಿಯೊಂದು ರಂಗದಲ್ಲೂ ಸಮಾನತೆ ಮತ್ತು ಸಮಾನ ನ್ಯಾಯದ ಒಂದು ನೈಜ ಮಾದರಿಯನ್ನು ಸ್ಥಾಪಿಸುವುದು. ಇಂತಹ ಉದಾಹರಣೆ ಇಲ್ಲದೆ ಹೋದರೆ ಸಮಾನತೆಯ ಧೋರಣೆ ಕೇವಲ ಒಂದು ಕಲ್ಪನೆ ಮಾತ್ರ. ಅದು ಎಂದೂ ವ್ಯಾವಹಾರಿಕ ವಿಷಯವಾಗಿ ಮಾರ್ಪಡಲಾರದು ಎಂದು ಭಾವಿಸುತ್ತಾರೆ.

## ಸಮಾನ ನ್ಯಾಯ

ಉಚ್ಚ ನೀಚತೆಯ ಕಲ್ಪನೆ ಪುರಾತನ ಕಾಲದಿಂದಲೂ ಎಲ್ಲೆಡೆ ಅಸ್ತಿತ್ವದಲ್ಲಿತ್ತು. ಆದ್ದರಿಂದ ಸಾಮಾಜಿಕ ಅಸಮಾನತೆಯ ಧೋರಣೆಯೂ ಎಲ್ಲಾ ಕಾಲಗಳಲ್ಲಿ ಜಾರಿಯಲ್ಲಿತ್ತು. ಪುರಾತನ ಕಾಲದ ಯಾವುದೇ ಯುಗ ಇದಕ್ಕೆ ಹೊರತಾಗಿರಲಿಲ್ಲ. ಮಾನವನಿಗೆ ತಿಳಿದಿರುವ ಐತಿಹಾಸಿಕ ಅವಧಿಯಲ್ಲಿ ಯಾವ ಕಾಲವೂ ಇದಕ್ಕೆ ಅತೀತವಲ್ಲ.

ಪುರಾತನ ಗ್ರೀಕ್ ಸುಧಾರಕರು ಮತ್ತು ಚಿಂತಕರು ಉಗಮಕ್ಕೆ ಖ್ಯಾತಿ ಪಡೆದಿದ್ದಾರೆ. ಆದರೆ ಪುರಾತನ ಗ್ರೀಕ್ ತತ್ವಜ್ಞಾನಿಯಾದ 'ಅರಿಸ್ಟಾಟಲ್'ನ ಪ್ರಕಾರ ಕೆಲವರು ಹುಟ್ಟು ದಾಸ(Nature Slaves)ರಾಗಿದ್ದಾರೆ. ಕೆಲವು ಚಿಂತಕರು ಈ ಅಭಿಪ್ರಾಯವನ್ನು ವಿರೋಧಿಸಿದರಾದರೂ ಅವರ ವಿರೋಧ ನಿರರ್ಥಕವಾಯಿತು. ಗ್ರೀಕ್ ಮತ್ತು ರೋಮ್‌ನಲ್ಲಿ 'ದಾಸ್ಯ' ವ್ಯಾವಹಾರಿಕವಾಗಿ ಅತ್ಯಂತ ವ್ಯಾಪಕ ಪ್ರಮಾಣದಲ್ಲಿ ಅಸ್ತಿತ್ವದಲ್ಲಿತ್ತು.

[Aristotle regards some humans as Natural Slaves, a point on which latter Roman Philosophers especially the stoics and jurists disagreed with him. Although slavery was as widespread in Rome as in Greece 5/93)

ಪುರಾತನ ಕಾಲದಲ್ಲಿ ಸಮಸ್ತ ವಿಶ್ವದ ಪರಿಸ್ಥಿತಿ ಹೀಗೆಯೇ ಇತ್ತು. ಭಾರತದಲ್ಲಿ ಸಾವಿರಾರು ವರ್ಷಗಳ ಕಾಲದಿಂದ ಕೆಲವರು ಉನ್ನತ ಜಾತಿಯವರು, ಇನ್ನು ಕೆಲವರು ಕೆಳಜಾತಿಯವರು ಎಂಬ ಪದ್ಧತಿ ಇತ್ತು. ಕೆಳಜಾತಿಯವರೊಂದಿಗೆ ಎಲ್ಲಾ ರೀತಿಯ ಅಸಮಾನ ವರ್ತನೆ ತೋರುವ ಅಧಿಕಾರ ಉನ್ನತ ಜಾತಿಯವರಿಗಿತ್ತು. ಭಾರತದ ಜನಮನದಲ್ಲಿ ಈ ಕಲ್ಪನೆ ಎಷ್ಟು ಬೇರೂರಿ ಬಿಟ್ಟಿದೆ ಎಂದರೆ ಆಧುನಿಕ ಕಾಲದಲ್ಲಿ ಹೊಸ ಕಾನೂನುಗಳು ಜಾರಿಗೆ ತರಲಾದ ನಂತರವೂ ಈ ಅಂತರ ವ್ಯಾವಹಾರಿಕವಾಗಿಯೂ ವೈಚಾರಿಕವಾಗಿಯೂ ಕೊನೆಗೊಂಡಿಲ್ಲ.

ಆಫ್ರಿಕಾವನ್ನು ಕರಾಳ ಖಂಡ(Dark Continent) ಎಂದು ಕರೆಯಲಾಯಿತು. ಭೌಗೋಳಿಕ ಸಂಪನ್ಮೂಲ ಮತ್ತು ಮಾನವ ಸಂಪನ್ಮೂಲದ ಆಧಾರದಲ್ಲಿ ಆಫ್ರಿಕಾ ಖಂಡವೂ ಇತರ ಪ್ರದೇಶಗಳಷ್ಟೇ ಅಮೂಲ್ಯವಾದ ಭೂಭಾಗವಾಗಿದೆ. ಆದರೆ ಅಲ್ಲಿನ ಜನರ ಚರ್ಮ ಕಪ್ಪಾಗಿತ್ತು. ಆದ್ದರಿಂದ ಅವರನ್ನು ಜನ್ಮತಃ ಕೀಳಾಗಿರುವವರು ಎಂದು ಭಾವಿಸಲಾಯಿತು. ನೀಗ್ರೋಗಳು ಹುಟ್ಟು ಗುಲಾಮರು. ಅವರು ಆದಿವಾಸಿಗಳು ಮತ್ತು ನಾಗರಿಕತೆಯನ್ನು ಬೆಳೆಸಿಕೊಳ್ಳಲು ಅಸಮರ್ಥರು ಎಂಬ ಕಲ್ಪನೆ ಹದಿನೈದನೆಯ ಶತಮಾನದಲ್ಲಿ ಯುರೋಪಿನಲ್ಲಿ ಬೆಳೆಯಿತು.

"The Negro is a Natural Slave. The Europeans regarded the Africans as premitive without culture and incapable of civilization." -State Trade in Africa 1985 - Page7

ವಂಶವಾಹಿ ರಾಜಾಡಳಿತದ ಕಾಲದಲ್ಲಿ ರಾಜಮನೆತನಗಳು ತಾವು ಪ್ರಭುಗಳು ಮತ್ತು ಇತರರು ಪ್ರಜೆಗಳು ಎಂಬ ಭಾವನೆ ಬೆಳೆಸಿಕೊಂಡಿತು. ಹುಟ್ಟಿನಿಂದಲೇ ನಮಗೆ ಪ್ರಾಮುಖ್ಯ ಪ್ರಾಪ್ತವಿದೆ ಎಂದು ಅವರು ಭಾವಿಸಿದರು. ಇತರರ ಮೇಲೆ ಆಡಳಿತ ನಡೆಸುವುದು ನಮ್ಮ ಜನ್ಮಸಿದ್ಧ ಹಕ್ಕು. ನಮ್ಮ ಮುಂದೆ ಬಾಗಿಕೊಂಡಿರುವುದು ಇತರರ ಕರ್ತವ್ಯ ಎಂಬುದು ಅವರ ಕಲ್ಪನೆಯಾಗಿತ್ತು.

ಪುರಾತನ ಕಾಲದಲ್ಲಿ ರಾಜನನ್ನು ಸಾಕ್ಷಾತ್ ದೇವನೆಂದು ಅಥವಾ ದೇವನ ಪ್ರತಿನಿಧಿಯೆಂದು ಭಾವಿಸಲಾಗುತ್ತಿತ್ತು. ಪ್ರಜೆಗಳು ಸದಾ ರಾಜರುಗಳಿಗೆ ಋಣಿಯಾಗಿರಬೇಕಾಗುತ್ತಿತ್ತು.

ಹಾಗೆಯೇ ಸಿರಿವಂತರು ತಮ್ಮನ್ನು ಅನುಕೂಲಸ್ಥ ವರ್ಗ (Previleged Class) ಎಂದು ಭಾವಿಸುತ್ತಿದ್ದರು. ಬಡವರನ್ನು ವಂಚಿತ ವರ್ಗ (Deprived Class) ಎಂದು ಭಾವಿಸಲಾಗುತ್ತಿತ್ತು. ಸಂಪತ್ತು ಬಂದರೆ ಆ ವ್ಯಕ್ತಿಗೆ ದೇವಾನುಗ್ರಹ ಪ್ರಾಪ್ತವಾಯಿತು ಮತ್ತು ಸಂಪತ್ತಿನಿಂದ ವಂಚಿತನಾಗಿದ್ದರೆ ಅವನು ದೇವಾನುಗ್ರಹದಿಂದ ವಂಚಿತನಾದವನು ಎಂದು ಕಲ್ಪಿಸಲಾಗುತ್ತಿತ್ತು.

ಮಾನವರ ನಡುವೆ ಪರಸ್ಪರ ಅಂತರ ಇರುವುದನ್ನು ಕಂಡು ಸಾಮಾಜಿಕ ಅಸಮಾನತೆಯ ಇಂತಹ ಕಲ್ಪನೆಗಳು ಹುಟ್ಟಿಕೊಂಡಿತು. ಒಬ್ಬ ವ್ಯಕ್ತಿ ಇನ್ನೊಬ್ಬ ವ್ಯಕ್ತಿಯ ನಡುವೆ ಹಾಗೂ ಒಂದು ಜನಾಂಗ ಇನ್ನೊಂದು ಜನಾಂಗದ ನಡುವೆ ಪ್ರತ್ಯಕ್ಷವಾಗಿ ಅನೇಕ ವ್ಯತ್ಯಾಸಗಳು ಕಂಡು ಬರುತ್ತವೆ. ಇದೊಂದು ವಾಸ್ತವಿಕತೆ. ವರ್ಣ, ಮೈಕಟ್ಟು, ಸಂಪತ್ತು, ಸಾಮರ್ಥ್ಯ ಹೀಗೆ ಎಲ್ಲದರಲ್ಲೂ ವ್ಯತ್ಯಾಸ ಕಂಡು ಬರುತ್ತದೆ. ಈ ಅಂತರದ ದುರ್ವ್ಯಾಖ್ಯಾನವೇ ಎಲ್ಲಾ ಬಗೆಯ ಪಕ್ಷಪಾತ ಮತ್ತು ಅಸಮಾನತೆಗೆ ಮೂಲ ಕಾರಣ.

ಸಾಮಾಜಿಕ ಅಸಮಾನತೆಯ ಕಲ್ಪನೆ ಇತಿಹಾಸ ಪೂರ್ವ ಕಾಲದಿಂದಲೂ ಅಸ್ತಿತ್ವದಲ್ಲಿದೆ. ಮಾನವರ ನಡುವಿನ ಅಂತರ ಹುಟ್ಟಿನಿಂದಾಗಿ ಇದೆ ಎಂಬ ಭಾವನೆಯೇ ಇದಕ್ಕೆ ಕಾರಣ. ಈ ಮಧ್ಯೆ ಅನೇಕ ರೀತಿಯ ಸಿದ್ಧಾಂತ ಮತ್ತು ತತ್ವಶಾಸ್ತ್ರಗಳು ಜನ್ಮತಾಳಿದವು. ಅವೆಲ್ಲವೂ ಮಾನವರ ನಡುವಿನ ಅಂತರಕ್ಕೆ ಯಾವುದಾದರೊಂದು ಮೂಲ ಕಾರಣವನ್ನು ಸೂಚಿಸುತ್ತವೆ. 'ಉಳ್ಳವರು', 'ಇಲ್ಲದವರಿಗೆ' ಸಮಾನ ಸ್ಥಾನಮಾನ ಮತ್ತು ನ್ಯಾಯವನ್ನು ನಿರಾಕರಿಸಲು ಇದರ ಜನ್ಮಾಧಾರಿತವಾದ ವ್ಯಾಖ್ಯಾನ (Birth based explanation)ಗಳೇ ಕಾರಣ.

ಉದಾಹರಣೆಗೆ, ಭಾರತದಲ್ಲಿ ಮಾನವರ ನಡುವಿನ ಈ ಅಂತರವನ್ನು ಕಂಡು ವರ್ಣಾಶ್ರಮದ ಕಲ್ಪನೆ ಹುಟ್ಟಿಕೊಂಡಿತು. 'ವರ್ಣ' ಎಂದರೆ ಬಣ್ಣ ಎಂದರ್ಥ. ವ್ಯಕ್ತಿಗಳ ನಡುವೆ ಬಣ್ಣದಲ್ಲಿ ಅಂತರ ಇರುವುದನ್ನು ಜನರು ಕಂಡರು.

ಆದ್ದರಿಂದ ಬಿಳಿಯ ಬಣ್ಣದವರು ದೇವನ ತಲೆಯಿಂದ ಹುಟ್ಟಿದವರು ಮತ್ತು ಕರಿಯ ಬಣ್ಣ ಇರುವವರು ದೇವನ ಕಾಲಿನಿಂದ ಹುಟ್ಟಿದವರು ಎಂಬ ಕಲ್ಪನೆಯನ್ನು ಅವರು ಹುಟ್ಟು ಹಾಕಿದರು.

"Indian Society is made up of four different varnas. The Rigveda(10.90) has declared that the Brahmin, the Kshatriya, the Vaisya, the Sudra issued forth at creation from the mouth, arms, thighs and feets of Purusa" (X 361)

ಯುರೋಪಿನಲ್ಲಿ ಜನಾಂಗೀಯವಾದ(Racism)ದ ಕಲ್ಪನೆ ಕಳೆದ ಶತಮಾನಗಳಲ್ಲಿ ತೀವ್ರಗತಿಯಲ್ಲಿ ಹರಡಿತು. ಈಗಲೂ ಅದು ತನ್ನದೇ ರೂಪದಲ್ಲಿ ಅಸ್ತಿತ್ವದಲ್ಲಿದೆ. ಯುರೋಪಿನವರಿಗೆ ತಮ್ಮ ಮತ್ತು ಇತರರ ನಡುವೆ ವರ್ಣ ಮತ್ತು ಸಂಸ್ಕೃತಿಯ ಅಂತರ ಇರುವುದು ಕಂಡು ಬಂತು. ಆದ್ದರಿಂದ ಅವರು ನಾವು ಇತರರಿಗಿಂತ ಶ್ರೇಷ್ಠರು(Superior) ಮತ್ತು ಇತರರು ನಮಗಿಂತ ಕೀಳು(Inferior) ಎಂಬ ಭಾವನೆಯನ್ನು ಬೆಳೆಸಿಕೊಂಡರು.

## ವಿಕಾಸವಾದ

ಆಧುನಿಕ ಕಾಲದಲ್ಲಿ ವಿಕಾಸವಾದದಿಂದ ಸಾಮಾಜಿಕ ಅಸಮಾನತೆಯ ಕಲ್ಪನೆಗೆ ಮತ್ತಷ್ಟು ಪುಷ್ಟಿ ದೊರೆಯಿತು. ಡಾರ್ವಿನ್ ಸಿದ್ಧಾಂತ(Social Darvinism)ದ ಪ್ರಕಾರ ಮಾನವ ನಿರಂತರ ವಿಕಾಸದ ಹಂತಗಳನ್ನು ದಾಟುತ್ತಿದ್ದಾನೆ. ಪಾಶ್ಚಿಮಾತ್ಯ ಸಂಸ್ಕೃತಿ ಅದರ ಉಚ್ಛ್ರಾಯವಾಗಿದೆ ಎಂದು ಭಾವಿಸಲಾಯಿತು.

Mankind was regarded as having achieved various levels of evolution, culminating on the White-European civilization (15:93)

ಈ ಆಧಾರದಲ್ಲಿ ಯುರೋಪಿನ ಬಿಳಿಯರು ಅತ್ಯಂತ ವಿಕಾಸ ಹೊಂದಿದವರು ಮತ್ತು ಬಿಳಿಯರಲ್ಲದವರು ವಿಕಾಸದ ಪ್ರಕ್ರಿಯೆಯಲ್ಲಿ ಹಿಂದುಳಿದವರು ಎಂದು ಭಾವಿಸಲಾಯಿತು.

ಪುರಾತನ ಕಾಲದಲ್ಲಿ ಮೂಢನಂಬಿಕೆಯ ಆಧಾರದಲ್ಲಿ ಜನಾಂಗಭೇದ ನೀತಿ ಹುಟ್ಟಿಕೊಂಡಿತ್ತು. ಆಧುನಿಕ ಕಾಲದಲ್ಲಿ ಡಾರ್ವಿನನ ವಿಕಾಸವಾದ ಅದಕ್ಕೊಂದು

ವೈಚಾರಿಕ ಬುನಾದಿಯನ್ನೂ ಒದಗಿಸಿದೆ. ಏಕೆಂದರೆ ಅವನ ಪ್ರಕಾರ ಅನೇಕ ಮಾನವ ಸಮಾಜಗಳು ವಿಕಾಸದ ಪ್ರಕ್ರಿಯೆಯಲ್ಲಿ ಇತರರಿಗಿಂತ ಹಿಂದುಳಿದಿವೆ. ಕೆಲವು ಗುಂಪುಗಳು ವಿಕಾಸದ ಮೂಲಕ ಉಚ್ಚ ಸ್ಥಾನ (Supirior) ತಲಪಿದವು. ಕೆಲವು ಗುಂಪುಗಳು ಹಿಂದುಳಿದು ವಿಕಾಸದ ಆರಂಭಿಕ ಹಂತ (Premitive Stage)ದಲ್ಲಿವೆ.

ಈ ವಿಕಾಸವಾದದಿಂದಾಗಿಯೇ ಯುರೋಪಿನ ಜನಾಂಗಗಳು ಇತರರನ್ನು ಹಿಂದುಳಿದ ಜನಾಂಗಗಳೆಂದು ಭಾವಿಸಿದವು. ಪರಿಣಾಮವಾಗಿ ಬಿಳಿಯರ ಹೊಣೆಗಾರಿಕೆ (White man's Burden) ಎಂಬ ಸಿದ್ಧಾಂತ ಹುಟ್ಟಿಕೊಂಡಿತು. ಅರ್ಥಾತ್ ಇತರ ಜನಾಂಗಗಳನ್ನು ಆಕ್ರಮಿಸುವ ಅವರಿಗೆ ನಾಗರಿಕತೆಯನ್ನು ಕಲಿಸುವ ಅಧಿಕಾರ ಬಿಳಿಯ ಜನಾಂಗಕ್ಕೆ ಇದೆ. ಆಧುನಿಕ ಕಾಲದ ವಸಾಹತುಶಾಹಿತ್ವ(Colonialism)ದ ಹಿಂದೆ ಈ ವಿಕಾಸವಾದದ ತರ್ಕವೇ ಕಾರ್ಯ ಪ್ರವೃತ್ತವಾಗಿದೆ.

ಈ ಕಲ್ಪನೆಗಳೆಲ್ಲವೂ ಒಂದಲ್ಲೊಂದು ರೂಪದಲ್ಲಿ ಈಗಲೂ ಅಸ್ತಿತ್ವದಲ್ಲಿವೆ. ಇಂದಿನ ಜಗತ್ತನ್ನು ವಿಸ್ತೃತವಾಗಿ ಎರಡು ಭಾಗಗಳಲ್ಲಿ ವಿಂಗಡಿಸಬಹುದು. ಸಂಪ್ರದಾಯ ಶರಣ ಜಗತ್ತು ಮತ್ತು ವೈಜ್ಞಾನಿಕ ಜಗತ್ತು. ಮೇಲ್ನೋಟಕ್ಕೆ ಮೊದಲನೆಯದು ಪ್ರಗತಿಪರವಾಗಿದ್ದರೆ ಎರಡನೆಯದು ಹಿಂದುಳಿದಿದೆ. ಆದರೆ ಸಾಮಾಜಿಕ ಅಸಮಾನತೆಯ ಮಟ್ಟಿಗೆ ಎರಡರಲ್ಲೂ ಯಾವ ವ್ಯತ್ಯಾಸವೂ ಇಲ್ಲ. ಏಕೆಂದರೆ ಆ ಸಮಾಜಗಳೆರಡೂ ಸಾಮಾಜಿಕ ಸಮಾನತೆಯನ್ನು ನಿರಾಕರಿಸುವಂತಹ ತತ್ವ ಮತ್ತು ವಿಶ್ವಾಸಗಳಲ್ಲಿ ನೆಲೆ ನಿಂತಿವೆ.

ಸಂಪ್ರದಾಯ ಶರಣ ಜಗತ್ತು ಬಹುಮಟ್ಟಿಗೆ 'ಕರ್ಮ' ಸಿದ್ಧಾಂತವನ್ನು ನಂಬುತ್ತದೆ. ಅರ್ಥಾತ್ ಪ್ರತಿಯೊಬ್ಬ ವ್ಯಕ್ತಿಯೂ ಹಿಂದಿನ ಕರ್ಮಗಳ ಭಾರ ಹೊತ್ತು ಹುಟ್ಟಿದ್ದಾನೆ. ಈ ನಿಸರ್ಗ ನಿಯಮವನ್ನು ಪ್ರತಿಯೊಬ್ಬ ವ್ಯಕ್ತಿಯೂ ಉಪಭೋಗಿಸಬೇಕಾಗುತ್ತದೆ. ಈ 'ವಿಶ್ವಾಸ'ದಲ್ಲೂ 'ಸಾಮಾಜಿಕ ನ್ಯಾಯದ ಪ್ರೇರಣೆ' ಸಂಪೂರ್ಣ ಕೊನೆಗೊಳ್ಳುತ್ತದೆ. ಏಕೆಂದರೆ ಈ ಸಿದ್ಧಾಂತದ ಪ್ರಕಾರ ಯಾವುದನ್ನು ನಾವು 'ಅನ್ಯಾಯ'ವೆಂದು ಕರೆಯುತ್ತೇವೋ ಅದು ಅನ್ಯಾಯವಲ್ಲ. ಬದಲಾಗಿ ಅದು ಮೇಲಿನಿಂದ ಹೇರಲಾದ ನಿಸರ್ಗ ನಿಯಮವಾಗಿದೆ. ಇಂತಹ ಅಸಂತುಷ್ಟ ಸ್ಥಿತಿಯಿಂದ ಅವನನ್ನು ಮೇಲೆತ್ತುವುದು ನಮ್ಮಿಂದ ಸಾಧ್ಯವಿಲ್ಲ. ಆದ್ದರಿಂದ 'ನ್ಯಾಯ' ಸ್ಥಾಪನೆಯ ಸ್ಫೂರ್ತಿಯೇ ಇದರ ಆಧಾರದಲ್ಲಿ ಬೆಳೆಯಲು ಸಾಧ್ಯವಿಲ್ಲ.

ವೈಜ್ಞಾನಿಕ ಜಗತ್ತು ಮತ್ತೊಂದು ಕಾರಣದಿಂದ ಇದೇ ರೀತಿಯ ವಿಶ್ವಾಸದಲ್ಲಿ ಸಿಲುಕಿದೆ. ಅದುವೇ ವಿಕಾಸವಾದ (Theory of evolution) ಜೈವಿಕ ವಿಕಾಸದ ಕಲ್ಪನೆ ಜೀವಿ(Species)ಗಳ ವಿಧಗಳನ್ನೂ ವಿವರಿಸುತ್ತದೆ. ಈ ಜೀವಿಗಳ ನಡುವೆ ಇರುವ ಅಂತರವನ್ನೂ ಅದು ವಿವರಿಸಬೇಕಾಗುತ್ತದೆ. ವಿಕಾಸವಾದದ ತಜ್ಞರ ಪ್ರಕಾರ, ಕೆಲವು ಮಾನವ ಗುಂಪುಗಳು ವಿಕಾಸದಲ್ಲಿ ಇತರ ಗುಂಪುಗಳಿಗಿಂತ ಮುಂದುವರಿದಿವೆ. ಸ್ವಾಭಾವಿಕವಾಗಿ ಕೆಲವು ಗುಂಪುಗಳು ಹಿಂದುಳಿದಿವೆ. ಉದಾಹರಣೆಗೆ 'ಮಹಿಳೆ'ಯ ಬಗ್ಗೆ ಡಾರ್ವಿನನ ಕಲ್ಪನೆಯೇನೆಂದರೆ ವಿಕಾಸದ ಆರಂಭಿಕ ಹಂತದಲ್ಲಿ ಆಕೆ ಹಿಂದುಳಿದಳು. ಪುರುಷ ಈ ರೀತಿ ಮಹಿಳೆಯರಿಗಿಂತ ಮುಂದುವರಿದನು. (Man has ultimately become superior to women).

ಆಫ್ರಿಕಾದ ಕರಿಯರು ಮತ್ತು ಇತರ ಪ್ರದೇಶದ ಕುಬ್ಜಗಾತ್ರದ ವ್ಯಕ್ತಿಗಳೂ ಡಾರ್ವಿನನ ಪ್ರಕಾರ ವಿಕಾಸದಲ್ಲಿ ಹಿಂದುಳಿದವರಾಗಿದ್ದಾರೆ. ಹೀಗೆ ವೈಜ್ಞಾನಿಕ ಜಗತ್ತು ಕೂಡ 'ಹಿಂದುಳಿದ ಜನಾಂಗ'ಗಳ ಬಗ್ಗೆ ಸಹಾನುಭೂತಿ ಹೊಂದಿಲ್ಲ. ಏಕೆಂದರೆ ಈ ವಿಶ್ವಾಸ ಯಾವುದೇ ರೀತಿಯ ಸಹಾನುಭೂತಿಯ ಸ್ವಭಾವವನ್ನು ಸ್ಫುರಿಸುವುದಿಲ್ಲ.

ಇಂತಹ ಕಲ್ಪನೆಗಳ ಆಧಾರದಲ್ಲೇ 'ಸ್ವಪ್ರಮಾದ' (Their own fault) ಎಂಬ ತತ್ವವೂ ಹುಟ್ಟಿಕೊಂಡಿತು. ಅರ್ಥಾತ್ ಇತರರಿಂದ ಅಸಮಾನತೆಯ ಧೋರಣೆ ಎದುರಿಸುತ್ತಿರುವುದು ಅದನ್ನು ಅನುಭವಿಸುತ್ತಿರುವವರ ತಪ್ಪಾಗಿದೆ. ಅಂದರೆ ಶೋಷಣೆ, ಶೋಷಿತನ ದುರ್ಭಾಗ್ಯವಾಗಿದೆಯಷ್ಟೇ. ಆದ್ದರಿಂದ ಶೋಷಕನನ್ನು ತಪ್ಪಿತಸ್ಥನೆನ್ನುವಂತಿಲ್ಲ.

ಇಸ್ಲಾಮ್ ಆಗಮನದೊಂದಿಗೆ ಈ ರೀತಿಯ ಎಲ್ಲಾ ಸಿದ್ಧಾಂತಗಳನ್ನು ಮೂಲೋತ್ಪಾಟನೆ ಮಾಡಿತು. ಮೇಲ್ನೋಟಕ್ಕೆ ಕಾಣುವ ಅಂತರದ ಹೊರತಾಗಿಯೂ ಮಾನವರೆಲ್ಲರೂ ಸಮಾನರು. ಎಲ್ಲರಿಗೂ ಸಮಾನವಾದ ಗೌರವಾದರಗಳಿವೆ. ಯಾವ ವ್ಯಕ್ತಿಯೂ ಇತರರಿಗಿಂತ ಮೇಲಾಗಲಿ, ಕೀಳಾಗಲಿ ಅಲ್ಲ ಎಂದು ಇಸ್ಲಾಮ್ ಹಲವು ರೀತಿಯಲ್ಲಿ ಸಾದರಪಡಿಸಿತು. ಇಲ್ಲಿ ಅದರ ಎರಡು ಆಧಾರಗಳನ್ನು ಉಲ್ಲೇಖಿಸಲಾಗುತ್ತಿದೆ. ಕುರ್‌ಆನ್ ಹೇಳುತ್ತದೆ.

"ಓ ಜನರೇ! ನಾವು ನಿಮ್ಮನ್ನು ಒಬ್ಬ ಪುರುಷ ಮತ್ತು ಒಬ್ಬಳು ಸ್ತ್ರೀಯಿಂದ ಉಂಟು ಮಾಡಿದೆವು. ತರುವಾಯ ನೀವು ಪರಸ್ಪರ ಪರಿಚಯಪಟ್ಟುಕೊಳ್ಳಲಿಕ್ಕಾಗಿ

ನಿಮ್ಮ ಜನಾಂಗಗಳನ್ನೂ ಗೋತ್ರಗಳನ್ನೂ ಮಾಡಿದೆವು. ನಿಮ್ಮ ಪೈಕಿ ಅತ್ಯಧಿಕ ಧರ್ಮನಿಷ್ಠನೇ ಅಲ್ಲಾಹನ ಬಳಿ ಅತಿ ಹೆಚ್ಚು ಗೌರವಕ್ಕೆ ಪಾತ್ರನು." (49:13)

ಕುರ್‌ಆನಿನ ಈ ಸೂಕ್ತದ ಪ್ರಕಾರ, ಮಾನವರ ನಡುವೆ ಇರುವ ವರ್ಣ ಮತ್ತು ಜನಾಂಗ ಭೇದಗಳು ಪರಿಚಯಕ್ಕಾಗಿದೆಯೇ ಹೊರತು ಭೇದಭಾವಕ್ಕಾಗಿ ಅಲ್ಲ. ಮೂಲತಃ ಮಾನವರೆಲ್ಲರೂ ಸಮಾನರಾಗಿದ್ದಾರೆ. ಅವರಲ್ಲಿ ಭೇದ ಕಲ್ಪಿಸಲು ಯಾವುದಾದರೂ ಆಧಾರವಿದ್ದರೆ ಅದು ಚಾರಿತ್ರ್ಯ ಮಾತ್ರ. ದೇವನಿಷ್ಠನಾದವನು ಮತ್ತು ದೇವನ ಹಾಗೂ ಮಾನವರ ಹಕ್ಕುಗಳನ್ನು ಸರಿಯಾಗಿ ಅರಿತು ಈಡೇರಿಸು ವವನು ದೇವನ ದೃಷ್ಟಿಯಲ್ಲಿ ಅತ್ಯಂತ ಗೌರವಾರ್ಹನಾಗಿದ್ದಾನೆ.

ಪ್ರವಾದಿವರ್ಯರು(ಸ) ತಮ್ಮ ವಿದಾಯ ಹಜ್ಜ್‌ನ ವೇಳೆ ನೀಡಿದ ಪ್ರವಚನದಲ್ಲಿ ಹೇಳಿದ ಅನೇಕ ಮಾತುಗಳಲ್ಲಿ ಈ ಕೆಳಗಿನದೂ ಸೇರಿತ್ತು.

"ಜನರೇ! ಕೇಳಿ! ನಿಶ್ಚಯವಾಗಿಯೂ ನಿಮ್ಮ ಪ್ರಭು ಏಕಮಾತ್ರನು. ನಿಶ್ಚಯವಾಗಿಯೂ ನಿಮ್ಮೆಲ್ಲರ ಆದಿಪಿತ ಒಬ್ಬರೇ, ನಿಮ್ಮಲ್ಲಿ ಯಾವುದೇ ಅರಬನಿಗೆ ಅರಬೇತರನ ಮೇಲೆ, ಯಾವುದೇ ಅರಬೇತರನಿಗೆ ಅರಬನ ಮೇಲೆ ಯಾವ ಮೇಲ್ಮೆಯೂ ಇಲ್ಲ. ಯಾವುದೇ ಕರಿಯನಿಗೆ ಬಿಳಿಯನ ಮೇಲೆ ಹಾಗೆಯೇ ಯಾವುದೇ ಬಿಳಿಯನಿಗೆ ಕರಿಯನ ಮೇಲೆ ಯಾವ ಮೇಲ್ಮೆಯೂ ಇಲ್ಲ. ಶ್ರೇಷ್ಠತೆಗೆ ಆಧಾರ ದೇವಭಕ್ತಿ ಮಾತ್ರವಾಗಿದೆ."

ಪ್ರವಾದಿವರ್ಯರು(ಸ) ತಮ್ಮ ಜೀವನದ ಕೊನೆಯ ವರ್ಷದಲ್ಲಿ ಈ ಪ್ರಕಟಣೆ ಹೊರಡಿಸಿದ್ದರು. ಆಗ ಸಮಸ್ತ ಅರೇಬಿಯಾ ವಿಜಯ ಸಾಧಿಸಿತ್ತು. ಆದ್ದರಿಂದ ಈ ಪ್ರಕಟಣೆ ಕೇವಲ ಓರ್ವ ಸುಧಾರಕನ ಪ್ರಕಟಣೆ ಮಾತ್ರವಾಗಿರಲಿಲ್ಲ. ಅದು ಆ ಕಾಲದ ಆಡಳಿತಾಧಿಕಾರಿಯ ಪ್ರಕಟಣೆಯಾಗಿತ್ತು. ಇದನ್ನು ಸಮಾನತೆಯ ತತ್ವದ ರೂಪದಲ್ಲಿ ಜನರು ಆಲಿಸಿದ್ದು ಮಾತ್ರವಲ್ಲ ತಕ್ಷಣವೇ ಅದನ್ನು ಅಸ್ತಿತ್ವಕ್ಕೂ ತಂದು ಜಾರಿಗೊಳಿಸಲಾಯಿತು.

ಈ ಪ್ರಕಟಣೆಯ ಮೂಲಕ ಅವರು ಸಮಸ್ತ ವಿಶ್ವದ ಜನರೊಡನೆ ಹೇಳಿದ್ದೇನೆಂದರೆ, - ಈ ವಿಶ್ವಕ್ಕೆ ಒಬ್ಬನೇ ಸೃಷ್ಟಿಕರ್ತನಿರುವಂತೆ ಮಾನವರೆಲ್ಲರೂ ಒಂದೇ ತಂದೆ-ತಾಯಿಯಿಂದ ಹುಟ್ಟಿದವರಾಗಿದ್ದಾರೆ. ಮಾನವರೆಲ್ಲರೂ ಒಂದೇ ಜನಾಂಗ. ಪರಸ್ಪರ ಸೋದರ ಸೋದರಿಯರು, ಮೇಲ್ನೋಟಕ್ಕೆ ಅವರಲ್ಲಿ

ಅಂತರವಿರಬಹುದು. ಆದರೆ ಗೌರವಾದರ ಕಾನೂನು ಹಾಗೂ ನ್ಯಾಯದ ದೃಷ್ಟಿಯಲ್ಲಿ ಅವರ ನಡುವೆ ಯಾವುದೇ ಅಂತರವಿಲ್ಲ.

ಮಾನವರ ನಡುವೆ ಇರುವ ಬಾಹ್ಯ ಅಂತರಗಳನ್ನು ಪರೀಕ್ಷಾರ್ಥವಾಗಿ ಇರಿಸಲಾಗಿದೆ. ಅವು ಭೇದಭಾವ ಕಲ್ಪಿಸಲಿಕ್ಕಾಗಿ ಇರುವುದಲ್ಲ ಎಂದು ಇಸ್ಲಾಮ್ ಹೇಳುತ್ತದೆ. ಅಲ್ಲಾಹನು ಜಗತ್ತಿನ ಮಾನವರೆಲ್ಲರನ್ನೂ ಪರೀಕ್ಷಾರ್ಥವಾಗಿಯೇ ಸೃಷ್ಟಿಸಿದ್ದಾನೆ. ವ್ಯಕ್ತಿಗೆ ಇರುವ ಸ್ಥಾನಮಾನ ಮತ್ತು ಸಾಧನಾನುಕೂಲತೆಗಳೆಲ್ಲವೂ ಪರೀಕ್ಷೆಗಾಗಿಯೇ ಇದೆ. ಲೋಕದಲ್ಲಿ ಇರುವ ಯಾವುದೇ ಕೊರತೆ ಅಥವಾ ಆಧಿಕ್ಯದ ಉದ್ದೇಶವೂ ಪರೀಕ್ಷೆಯೇ ಆಗಿದೆ. ಆದ್ದರಿಂದ ಈ ಸತ್ವ ಪರೀಕ್ಷೆಯಲ್ಲಿ ತಾನು ತೇರ್ಗಡೆಯಾಗುತ್ತೇನೋ ಇಲ್ಲವೋ ಎಂಬುದಕ್ಕೆ ವ್ಯಕ್ತಿ ಪೂರ್ಣ ಗಮನವನ್ನು ಹರಿಸಬೇಕಾಗಿದೆ. ತನ್ನ ಆರ್ಥಿಕ ಸ್ಥಿತಿಗಾಗಿ ಅವನು ಕೀಳರಿಮೆ ಅಥವಾ ಮೇಲರಿಮೆಗೆ ಈಡಾಗಬಾರದು.

## ವೈಜ್ಞಾನಿಕ ಪುರಾವೆಗಳು

ಆಧುನಿಕ ಕಾಲದಲ್ಲಿ ಮಾನವ ಜನಾಂಗದ ಬಗ್ಗೆ ನಡೆದಿರುವ ಹೊಸ ಮನೋವೈಜ್ಞಾನಿಕ ಮತ್ತು ಜೈವಿಕ ಪ್ರಯೋಗಗಳು ಇಸ್ಲಾಮಿನ ನಿಲುವನ್ನು ಸಮರ್ಥಿಸುತ್ತದೆ. ಉಳಿದೆಲ್ಲಾ ಸಿದ್ಧಾಂತಗಳನ್ನು ಅದು ವೈಚಾರಿಕ ಬುನಾದಿಗಳ ಆಧಾರದಲ್ಲೇ ಸ್ಪಷ್ಟವಾಗಿ ನಿರಾಕರಿಸುತ್ತವೆ.

ಆಧುನಿಕ ಕಾಲದಲ್ಲಿ 'ಪರಮಾಣುವಿನ ಜೀವಶಾಸ್ತ್ರ'ವು(Molecular Biology)ಸಂಶೋಧನೆಯ ಹೊಸ ದ್ವಾರಗಳನ್ನು ತೆರೆದಿದೆ. ಅಮೇರಿಕದ ವಂಶಶಾಸ್ತ್ರದ(Genetics) ತಜ್ಞರ ಒಂದು ತಂಡ ಮಾನವರೆಲ್ಲರ ಸಮಾನ ಪೂರ್ವಜನನ್ನು(Common Ancestor) ಕಂಡು ಹಿಡಿಯಲು ಸಂಶೋಧನೆಯ ಮೂಲಕ ಪ್ರಯತ್ನಿಸಿತು.

ಈ ತಂಡ ವಂಶವಾಹಿ ಸಾಕ್ಷ್ಯದ(Genetic evidence) ಆಧಾರದಲ್ಲಿ ಮಾನವರೆಲ್ಲರ ಆದಿಪಿತ ಒಬ್ಬನೇ ಆಗಿದ್ದ ಎಂಬ ತೀರ್ಮಾನಕ್ಕೆ ಬಂತು. ಬಾಹ್ಯವಾಗಿ ಕಾಣುವ ವರ್ಣ ಇತ್ಯಾದಿ ವ್ಯತ್ಯಾಸಗಳು ಅದರಲ್ಲಿ ಆಗಿರುವ ಸೇರ್ಪಡೆಯಾಗಿದೆ. ಅದಕ್ಕೂ ಜನಾಂಗ ಭೇದಕ್ಕೂ ಯಾವುದೇ ರೀತಿಯ

ಸಂಬಂಧವಿಲ್ಲ. ತಂಡದ ಸಂಶೋಧನೆಯ ಪ್ರಕಾರ, ಮಾನವರೆಲ್ಲರೂ ಒಂದು ದೊಡ್ಡ ಕುಟುಂಬವಾಗಿದ್ದಾರೆ. ಎಲ್ಲರೂ ಒಂದೇ 'ಜೈವಿಕ ಭ್ರಾತೃತ್ವ'ದ(Biological Brotherhood) ಸಂಬಂಧದಲ್ಲಿ ಬೆಸೆಯಲ್ಪಟ್ಟಿದ್ದಾರೆ.

(ನ್ಯೂಸ್ ವೀಕ್, ಜನವರಿ 11, 1988)

ಈ ವಿಷಯದ ಕುರಿತು ಆಧುನಿಕ ಕಾಲದಲ್ಲಿ ಅತ್ಯಧಿಕ ಗ್ರಂಥ ಮತ್ತು ಸಂಶೋಧನಾತ್ಮಕ ಕೃತಿಗಳು ರಚಿತವಾಗಿವೆ. ಯುನೆಸ್ಕೋದ ಆಶ್ರಯದಲ್ಲಿ ಪ್ರಕಟವಾದ ಒಂದು ಪುಸ್ತಕ ಇಂತಿದೆ.

The Race Question in Modern Science (ಆಧುನಿಕ ವಿಜ್ಞಾನದ ಪ್ರಕಾರ ಜನಾಂಗ ಪ್ರಶ್ನೆ) -J. Comas 1956

ಈ ಗ್ರಂಥದ 'ಜನಾಂಗೀಯ ಮೂಢನಂಬಿಕೆ'(Racial Myths) ಎಂಬ ಭಾಗ ಅತ್ಯಂತ ಗಮನಾರ್ಹವಾಗಿದೆ.

## ಪ್ರೇರಕ ಶಕ್ತಿ

ಇಲ್ಲಿ ಮತ್ತೊಂದು ಪ್ರಶ್ನೆ ಉದ್ಭವಿಸುತ್ತದೆ. ಈ ವೈಜ್ಞಾನಿಕ ಸಂಶೋಧನೆಗಳ ಹೊರತಾಗಿಯೂ ವ್ಯಾವಹಾರಿಕ ಜೀವನದಲ್ಲಿ ಯಾವುದೇ ದೊಡ್ಡ ವ್ಯತ್ಯಾಸ ಯಾಕೆ ಉಂಟಾಗಿಲ್ಲ? ತಮ್ಮನ್ನು ಉನ್ನತ ಜನಾಂಗವೆಂದು ಭಾವಿಸಿದ್ದ ಜನಾಂಗಗಳು ಈಗಲೂ ಉನ್ನತವಾಗಿಯೇ ಇವೆ. ಪುರಾತನ ಕಲ್ಪನೆಯಂತೆ ನಿಕೃಷ್ಟವೆಂದು ಭಾವಿಸಲಾಗಿದ್ದ ಜನಾಂಗಗಳ ಜತೆಗೆ ಹೊಸ ಹೊಸ ರೂಪದಲ್ಲಿ ಅನ್ಯಾಯವೆಸಗಲಾಗುತ್ತಿದೆ.

ಇದಕ್ಕೆ ಕಾರಣವೇನೆಂದರೆ- ಸಾಮಾಜಿಕ ನ್ಯಾಯವನ್ನು ಸ್ಥಾಪಿಸಲು ಕೇವಲ ಒಂದು ಸಿದ್ಧಾಂತವಿದ್ದರೆ ಸಾಲದು. ಅದರ ಜತೆಗೆ ಅತ್ಯಂತ ಪ್ರಬಲವಾದ ಒಂದು ಪ್ರೇರಕ ಶಕ್ತಿಯೂ ಇರಬೇಕಾಗಿದೆ. ಇಸ್ಲಾಮಿನ ಹೊರತು ಬೇರೆಲ್ಲೂ ಇಂತಹ ಪ್ರೇರಕ ಶಕ್ತಿ ದೊರೆಯುವುದಿಲ್ಲ. ಇಸ್ಲಾಮ್ ಈ ನಿಟ್ಟಿನಲ್ಲಿ ಸಮಗ್ರವಾದ ಸಿದ್ಧಾಂತವನ್ನು ನೀಡಿರುವುದರ ಜತೆಗೆ ಅತ್ಯಂತ ಪ್ರಬಲವಾದ ಪ್ರೇರಕ ಶಕ್ತಿಯನ್ನೂ ಮಾನವನಿಗೆ ನೀಡಿದೆ.

ಪವಿತ್ರ ಕುರ್‌ಆನಿನಲ್ಲಿ ಒಂದೆಡೆ ನ್ಯಾಯದ ಆಜ್ಞೆ ನೀಡಲಾಗಿದೆ. (ಅನ್ನಹ್ಲ್ 90) ಇನ್ನೊಂದೆಡೆ ಕರ್ಮಗಳಿಗೆ ಪ್ರತಿಫಲವಿದೆ ಎಂಬ ಸಿದ್ಧಾಂತವನ್ನೂ ಕೊಡಲಾಗಿದೆ.

ಮಾನವನ ಕರ್ಮಗಳನ್ನೆಲ್ಲಾ ಸಂಪೂರ್ಣ ದಾಖಲಿಸಲಾಗುತ್ತದೆ ಎಂಬ ಎಚ್ಚರಿಕೆಯನ್ನೂ ನೀಡಲಾಗಿದೆ. ಮರಣದ ನಂತರ ಪ್ರತಿಯೊಬ್ಬನನ್ನೂ ಅಲ್ಲಾಹನ ಆಸ್ಥಾನದಲ್ಲಿ ನಿಲ್ಲಿಸಲಾಗುತ್ತದೆ ಎಂದು ಹೇಳಲಾಗಿದೆ. ಅಲ್ಲಿ ಪ್ರತಿಯೊಬ್ಬನಿಗೂ ಅವನ ಕರ್ಮದ ಪ್ರತಿಫಲ ನೀಡಲಾಗುವುದು. ಅಕ್ರಮವೆಸಗುವ ಯಾವ ವ್ಯಕ್ತಿಯೂ ಅಲ್ಲಾಹನ ಹಿಡಿತದಿಂದ ಪಾರಾಗಲಾರ. ಪ್ರತಿಯೊಬ್ಬ ವ್ಯಕ್ತಿಯೂ ತಾನು ಮಾಡಿದ್ದನ್ನು ಅನುಭವಿಸಬೇಕಾದ ಕಾಲ ಖಂಡಿತವಾಗಿಯೂ ಬರಲಿದೆ. ಅವನು ಅಣುತೂಕದಷ್ಟು ಅಕ್ರಮವೆಸಗಿದ್ದರೂ ಸರಿಯೇ. (ಝಿಲ್‌ಝಾಲ್)

ಈ ಉತ್ತರದಾಯಿತ್ವದ(Accountability) ಸಿದ್ಧಾಂತ ಮಾನವನನ್ನು ಸದಾ ಎಚ್ಚರದಿಂದಿರುವಂತೆ ಮಾಡುತ್ತದೆ. ಈ ಪ್ರಜ್ಞೆ ಜಾಗೃತಗೊಂಡ ವ್ಯಕ್ತಿ ಮಾನವರೊಂದಿಗೆ ವ್ಯವಹರಿಸುವಾಗ ಅತ್ಯಂತ ಸಂತುಲಿತನಾಗಿರುತ್ತಾನೆ. ಪ್ರತಿಯೊಬ್ಬನೊಡನೆ ನ್ಯಾಯಪಾಲಿಸುವುದು ಮತ್ತು ಜನರಿಗೆ ಅನ್ಯಾಯವಾಗದಂತೆ ತನ್ನನ್ನು ತಡೆದಿರಿಸುವುದು ತನ್ನ ಹಿತಕ್ಕೆ ಅತ್ಯವಶ್ಯಕವೆಂದು ಅವನು ಭಾವಿಸುತ್ತಾನೆ.

ಸಾಮಾನ್ಯ ಪರಿಸ್ಥಿತಿಯಲ್ಲಿ ಸಾಮಾಜಿಕ ನ್ಯಾಯ ಕೇವಲ ಇತರರ ಅವಶ್ಯಕತೆ ಮಾತ್ರವಾಗಿರುತ್ತದೆ. ಆದರೆ 'ಪರಲೋಕದ ಉತ್ತರದಾಯಿತ್ವ'ದ ಕಲ್ಪನೆ 'ಸಾಮಾಜಿಕ ನ್ಯಾಯ'ವನ್ನು ತನ್ನ ಅವಶ್ಯಕತೆಯಾಗಿ ಮಾರ್ಪಡಿಸುತ್ತದೆ. ತನ್ನ ಅವಶ್ಯಕತೆಯ ಬಗ್ಗೆ ಯಾರೂ ಅಲಕ್ಷ್ಯರಾಗಿರುವುದಿಲ್ಲ ಎಂಬುದನ್ನು ಪ್ರತ್ಯೇಕ ಹೇಳಬೇಕಾಗಿಲ್ಲ.

ಉತ್ತರದಾಯಿತ್ವದ ಪ್ರಜ್ಞೆ ಎಷ್ಟು ಪ್ರಬಲವಾದುದೆಂದರೆ ಅನ್ಯಾಯ ಮಾಡುವುದಂತಿರಲಿ ಅನ್ಯಾಯದ ಕಲ್ಪನೆಯಿಂದಲೂ ಮಾನವ ದೂರವಿರುತ್ತಾನೆ. ಪ್ರವಾದಿವರ್ಯರು(ಸ) ಒಮ್ಮೆ ತಮ್ಮ ಪತ್ನಿ ಉಮ್ಮು ಸಲಮರ(ರ) ಕೋಣೆಯಲ್ಲಿದ್ದರು. ಯಾವುದೋ ಕೆಲಸಕ್ಕೆ ಅವರು ತಮ್ಮ ಸೇವಕಿಯನ್ನು ಕಳುಹಿಸಿದರು. ಅವಳು ಹೊರ ಹೋಗಿ ಆಟ ವಿನೋದಗಳನ್ನು ನೋಡುವುದರಲ್ಲಿ ಮಗ್ನಳಾದಳು. ಮರಳುವಾಗ ಬಹಳ ತಡವಾಯಿತು. ಆಗ ಪ್ರವಾದಿವರ್ಯರು(ಸ) ತಮ್ಮ ಕೈಯಲ್ಲಿ ದಂತಕುಂಚ(ಮಿಸ್ವಾಕ್)ವೊಂದನ್ನು ಹಿಡಿದಿದ್ದರು. ಪ್ರವಾದಿವರ್ಯರ(ಸ) ಮುಖದಲ್ಲಿ ಸಿಟ್ಟಿನ ಲಕ್ಷಣಗಳು ಗೋಚರಿಸುತ್ತಿತ್ತು. ಆದರೂ ಅವರು ಸೇವಕಿಯನ್ನುದ್ದೇಶಿಸಿ ಇಷ್ಟೇ ಹೇಳಿದರು. "ನನಗೆ ನಿರ್ಣಾಯಕ ದಿನದ ಪ್ರತಿಫಲದ ಭಯವಿಲ್ಲದಿರುತ್ತಿದ್ದರೆ ನಾನು ನಿನ್ನನ್ನು ಈ ದಂತಕುಂಚದಿಂದಲೇ ಹೊಡೆಯುತ್ತಿದ್ದೆ."

ಪುರಾತನ ಕಾಲದಲ್ಲಿ ಗುಲಾಮರನ್ನು ಹೊಡೆಯುವುದು ಒಡೆಯನ ಮೂಲಭೂತ ಹಕ್ಕು ಎಂದು ಭಾವಿಸಲಾಗುತ್ತಿತ್ತು. ಆದರೆ ಇಸ್ಲಾಮ್ ಜನರಲ್ಲಿ ಮೂಡಿಸಿದ ಮನೋಭಾವ ಎಂತಹದ್ದಾಗಿತ್ತೆಂದರೆ ಸೇವಕರು ತಪ್ಪೆಸಗಿದಾಗಲೂ ಜನರು ಅವರಿಗೆ ಹೊಡೆಯಲು ಹಿಂಜರಿಯುತ್ತಿದ್ದರು. ಏಕೆಂದರೆ ಇದರಿಂದ ನಾವೆಲ್ಲಿ ವಿಚಾರಣೆಗೆ ಗುರಿಯಾಗಬೇಕಾದೀತೋ ಎಂದು ಅವರು ಭಯಪಡುತ್ತಿದ್ದರು.

ಅಬೂಮಸ್‌ಊದ್ ಅನ್ಸಾರಿಯೆಂಬ ಪ್ರವಾದಿಯ ಸಂಗಾತಿಯೊಬ್ಬರು ಒಮ್ಮೆ ಯಾವುದೋ ತಪ್ಪಿಗಾಗಿ ತಮ್ಮ ಗುಲಾಮನನ್ನು ಥಳಿಸತೊಡಗಿದರು. ಆ ವೇಳೆ ಪ್ರವಾದಿವರ್ಯರು(ಸ) ಆ ಮಾರ್ಗವಾಗಿ ಹೋಗುತ್ತಿದ್ದರು. ಅವರು ತಕ್ಷಣ ಹೇಳಿದರು. "ಓ ಅಬೂಮಸ್‌ಊದ್, ನಿನಗೆ ಈ ಗುಲಾಮನ ಮೇಲೆ ಇರುವ ಅಧಿಕಾರಕ್ಕಿಂತ ಹೆಚ್ಚು ಅಧಿಕಾರ ಅಲ್ಲಾಹನಿಗೆ ನಿನ್ನ ಮೇಲೆ ಇದೆ." ಇದನ್ನು ಕೇಳುತ್ತಲೇ ಬೆತ್ತ ಹ.ಅಬೂಮಸ್‌ಊದ್‌ರ(ರ) ಕೈಯಿಂದ ಕೆಳಗೆ ಬಿತ್ತು ಮತ್ತು ಅವರು ಗುಲಾಮನನ್ನು ಸ್ವತಂತ್ರಗೊಳಿಸಿದರು.

ಇಸ್ಲಾಮ್ ಬಾಹ್ಯ ಅಂತರಗಳನ್ನು ಅಳಿಸಿ ಮಾನವನನ್ನು ಇನ್ನೊಬ್ಬ ವ್ಯಕ್ತಿಯ ಸ್ಥಾನದಲ್ಲೇ ನಿಲ್ಲಿಸುತ್ತದೆಂದು ಈ ಘಟನೆಯಿಂದ ವ್ಯಕ್ತವಾಗುತ್ತದೆ. ಅಬೂಮಸ್‌ಊದ್(ರ) ತಮ್ಮ ಮತ್ತು ತಮ್ಮ ಗುಲಾಮನ ನಡುವೆ ಅಂತರವಿದೆ ಯೆಂದು ಭಾವಿಸಿದ್ದರು. ಅವರು ತಮ್ಮನ್ನು ಪ್ರಬಲ ಮತ್ತು ಶಕ್ತಿಶಾಲಿ ಎಂದು ಕಲ್ಪಿಸಿಕೊಂಡಿದ್ದರು. ಹಾಗೆಯೇ ತಮ್ಮ ಗುಲಾಮ ತಮಗಿಂತ ಚಿಕ್ಕವನು ಮತ್ತು ದುರ್ಬಲ ಎಂದು ಎಣಿಸಿದ್ದರು. ಆದರೆ ಪ್ರವಾದಿವರ್ಯರು(ಸ) ನೆನಪು ಮಾಡಿದಾಗ ಗುಲಾಮ ನಿಂತಲ್ಲೇ ನಾನೂ ನಿಂತಿದ್ದೇನೆ ಎಂದು ಅವರಿಗೆ ಮನವರಿಕೆಯಾಯಿತು. ಏಕೆಂದರೆ ನಿಜವಾದ ಸ್ಪರ್ಧೆ ಮಾನವ-ಮಾನವರ ನಡುವೆ ಅಲ್ಲ. ಬದಲಾಗಿ ಅಲ್ಲಾಹನ ಮತ್ತು ಮಾನವರ ನಡುವೆ ಇದೆ. ದೇವನೆದುರಿಗೆ ನಾನಾದರೋ ಅತ್ಯಂತ ದುರ್ಬಲನಾಗಿದ್ದೇನೆ ಎಂದು ಅವನು ಭಾವಿಸುತ್ತಾನೆ.

ಇಬ್ಬರ ನಡುವಿನ ವ್ಯತ್ಯಾಸದ ಕಲ್ಪನೆ ಸಾಮಾಜಿಕ ಅಸಮಾನತೆಯನ್ನು ಬೆಳೆಸುತ್ತದೆ. ಈ ಅಂತರ ಕೊನೆಗೊಂಡರೆ ಸಾಮಾಜಿಕ ಅಸಮಾನತೆಯೂ ಕೊನೆಗೊಳ್ಳುತ್ತದೆ.

ಶೋಷಣೆ ಮತ್ತು ಸಾಮಾಜಿಕ ಅಸಮಾನತೆಯ ಎಲ್ಲಾ ಘಟನೆಗಳು ಮಾನವರ ನಡುವಿನ ಅಂತರದಿಂದಾಗಿ ಹುಟ್ಟಿಕೊಳ್ಳುತ್ತವೆ ಎಂಬುದೂ ಒಂದು ವಾಸ್ತವಿಕತೆಯಾಗಿದೆ. ಮಾನವರಲ್ಲಿ ಪ್ರತ್ಯಕ್ಷವಾಗಿ ಕೆಲವರು ಪ್ರಬಲರೂ ಮತ್ತೆ ಕೆಲವರು ದುರ್ಬಲರೂ ಆಗಿರುತ್ತಾರೆ. ಕೆಲವರು ಸಿರಿವಂತರೂ ಮತ್ತೆ ಕೆಲವರು ಬಡವರೂ ಆಗಿರುತ್ತಾರೆ. ಪ್ರಬಲರು ಮತ್ತು ಸಿರಿವಂತರಾದವರು ತಮ್ಮನ್ನು ಬಡವರಿಗಿಂತ ಉನ್ನತರು ಎಂದು ಭಾವಿಸುತ್ತಾರೆ. ನಾವು ಅವರ ಮೇಲೆ ಯಾವ ರೀತಿಯ ಹಸ್ತಕ್ಷೇಪ ಬೇಕಾದರೂ ನಡೆಸಬಹುದು. ಅವರಿಗೆ ನಮ್ಮನ್ನು ಏನು ಮಾಡಲಿಕ್ಕೂ ಸಾಧ್ಯವಾಗದು. ನಮ್ಮ ಉನ್ನತ ಸ್ಥಿತಿ ಅವರ ವಿರುದ್ಧ ಎಲ್ಲಾ ರೀತಿಯ ಪ್ರತಿರೋಧ ಕೈಗೊಳ್ಳಲು ಸಾಕು ಎಂದು ಅವರು ಭಾವಿಸುತ್ತಾರೆ.

ಆದರೆ ಇಸ್ಲಾಮ್ ಮನುಷ್ಯನ ನಡುವಿನ ಎಲ್ಲಾ ವ್ಯವಹಾರಗಳು ದೇವನ ಮುಂದಿರುವ ವ್ಯವಹಾರಗಳೆನ್ನುತ್ತವೆ. ಪ್ರತಿಯೊಂದು ಪ್ರಕರಣ ಕೊನೆಗೆ ದೇವನ ಮುಂದೆಯೇ ಸಮರ್ಪಿಸಲ್ಪಡುತ್ತದೆ. ದೇವನು ಎಲ್ಲ ಶಕ್ತಿಶಾಲಿಗಳಿಗಿಂತಲೂ ಮಿಗಿಲಾದ ಶಕ್ತಿಶಾಲಿಯಾಗಿದ್ದಾನೆ. ಅವನು ಪರಮ ನ್ಯಾಯದೊಂದಿಗೆ ಪ್ರತಿಯೊಬ್ಬನ ಮೇಲೂ ತನ್ನ ನ್ಯಾಯವನ್ನು ಜಾರಿಗೊಳಿಸುವನು. ಅನಂತರ ದೇವನ ತೀರ್ಮಾನ ಬರುವುದಕ್ಕೆ ಮೊದಲು ತನ್ನನ್ನು ರಕ್ಷಿಸಿಕೊಳ್ಳಲು ಯಾರಿಗೂ ಸಾಧ್ಯವಾಗದು.

ಹೀಗೆ ಪ್ರತಿಯೊಂದು ವ್ಯವಹಾರವೂ ಮಾನವರ ನಡುವಿನ ವ್ಯವಹಾರ ಮಾತ್ರವಾಗಿರದೆ ದೇವನ ಮತ್ತು ಮಾನವರ ನಡುವಿನ ವ್ಯವಹಾರವಾಗಿ ಮಾರ್ಪಡುತ್ತದೆ. ಒಂದೆಡೆ ದೇವನಿದ್ದರೆ ಇನ್ನೊಂದೆಡೆ ಸಕಲ ಮಾನವರಿರುತ್ತಾರೆ. ಇಂತಹ ಕಲ್ಪನೆ ಮೂಡಿದರೆ ಮಾನವರ ನಡುವೆ ಯಾರೂ ಶಕ್ತಿಶಾಲಿಯಾಗಿರುವುದಿಲ್ಲ. ಪ್ರತಿಯೊಬ್ಬ ವ್ಯಕ್ತಿಯೂ ತನ್ನನ್ನು ವಿನೀತನೆಂದು ಭಾವಿಸಿಕೊಳ್ಳುತ್ತಾನೆ.

ಇದು ನಿಸ್ಸಂಶಯವಾಗಿ ಸಾಮಾಜಿಕ ನ್ಯಾಯದ ಅತ್ಯಂತ ಪ್ರಬಲವಾದ ಪ್ರೇರಕ ಶಕ್ತಿಯಾಗಿದೆ. ಈ ಭಾವನೆ ಜಾಗೃತವಾದರೆ ವ್ಯಕ್ತಿ ಯಾವ ಕಾರಣಕ್ಕೂ ಇನ್ನೋರ್ವನ ಮೇಲೆ ಅನ್ಯಾಯವೆಸಗುವ ಧೈರ್ಯ ತೋರಲಾರ.

ದೇವನ ಮೇಲೆ ನಂಬಿಕೆಯಿಲ್ಲದ ಸಮಾಜದಲ್ಲಿ ಇಂತಹ ನಿಯಂತ್ರಣ ಸಾಧ್ಯವಿಲ್ಲ. ದೇವನನ್ನು ನಂಬದಿದ್ದರೆ ವ್ಯವಹಾರಗಳೆಲ್ಲವೂ ಮಾನವರ ನಡುವಿನ ಪರಸ್ಪರ ವ್ಯವಹಾರವಾಗಿ ಮಾರ್ಪಡುತ್ತದೆ. ಹೀಗೆ ಮಾನವ-ಮಾನವರ ನಡುವೆ

ವ್ಯವಹಾರ ಏರ್ಪಟ್ಟರೆ ಅವರ ನಡುವೆ ಪರಸ್ಪರ ಯಾವುದೇ ರೀತಿಯ ಅಂತರವಿಲ್ಲವೆಂದು ಯಾವ ರೀತಿಯಲ್ಲೂ ಅವರಿಗೆ ಮನವರಿಕೆ ಮಾಡಲು ಸಾಧ್ಯವಿಲ್ಲ. ಏಕೆಂದರೆ ಅಂತರ ನಿಜಾರ್ಥದಲ್ಲೂ ಇದೆ ಮತ್ತು ಅತ್ಯಂತ ಸ್ಪಷ್ಟವಾದ ಅಂತರವಿದೆ.

ಮಾನವರ ನಡುವಿನ ಅಂತರವನ್ನು ಸಂಪೂರ್ಣವಾಗಿ ಕೊನೆಗೊಳಿಸಲು ಸಾಧ್ಯವಿಲ್ಲ. ಆದರೆ ಅದರ ಪ್ರಭಾವವನ್ನು ಕಡಿಮೆಗೊಳಿಸಬಹುದು. ಅದಕ್ಕಿರುವ ಏಕೈಕ ಮಾರ್ಗವೆಂದರೆ ಮಾನವ-ಮಾನವರ ನಡುವಿನ ಸಂಬಂಧವನ್ನು ದೇವನ ಮತ್ತು ಮಾನವರ ನಡುವೆ ಇರುವ ಸಂಬಂಧವನ್ನಾಗಿ ಮಾಡುವುದು. ಮಾನವ ರೆಲ್ಲರಿಗೂ ದೇವನಿದ್ದಾನೆ ಮತ್ತು ಅಂತಿಮವಾಗಿ ಎಲ್ಲ ವ್ಯವಹಾರಗಳು ಅವನ ಮುಂದೆಯೇ ಸಮರ್ಪಿಸಲ್ಪಡುತ್ತದೆ. ಅವನ ತೀರ್ಮಾನವನ್ನು ನಿರಾಕರಿಸಲು ಯಾರಿಂದಲೂ ಸಾಧ್ಯವಿಲ್ಲ. ಎಂಬ ಕಲ್ಪನೆ ಮೂಡಿಬರಬೇಕಾಗಿದೆ.

ಇಸ್ಲಾಮಲ್ಲದೆ ಬೇರೆಲ್ಲ ಧರ್ಮಗಳಲ್ಲಿರುವ ದೇವಕಲ್ಪನೆ ವಿರೂಪಗೊಂಡಿರು ವುದರಿಂದ ಸಾಮಾಜಿಕ ಸಮಾನತೆಯನ್ನು ಸಾಧಿಸುವ ಪ್ರಭಾವವನ್ನು ಅವು ಕಳಕೊಂಡಿವೆ. ಉದಾಹರಣೆಗೆ, ಕ್ರೈಸ್ತ ಧರ್ಮದಲ್ಲಿ ದೇವನಪುತ್ರ ಶಿಲುಬೆಗೇರಿ ಮಾನವರೆಲ್ಲರ ಪಾಪಗಳಿಗೆ ಪ್ರಾಯಶ್ಚಿತ್ತ ಮಾಡಿದ್ದಾರೆ. ಯಹೂದ್ಯರ ಪ್ರಕಾರ, ಮೋಕ್ಷ ಒಂದು ಸಮೂಹಕ್ಕೆ ಮಾತ್ರವಿದೆ ಮತ್ತು ಆ ಬಗ್ಗೆ ಮೊದಲೇ ನಿರ್ಧಾರ ಆಗಿ ಬಿಟ್ಟಿದೆ. ಹಿಂದೂ ಧರ್ಮದಲ್ಲಿ ಏಕದೇವನ ಕಲ್ಪನೆ, ಅದ್ವೈತ ಸಿದ್ಧಾಂತದ (Monism) ರೂಪದಲ್ಲಿದ್ದು ಪ್ರಭಾವಹೀನವಾಗಿದೆ.

ಇಸ್ಲಾಮಿನ ಏಕದೇವತ್ವದ ಕಲ್ಪನೆಯ ಪ್ರಕಾರ ದೇವನು ಭಿನ್ನ ಅಸ್ತಿತ್ವವಾಗಿದ್ದಾನೆ ಮತ್ತು ಮಾನವರೆಲ್ಲರೂ ಅವನ ದಾಸರು ಮತ್ತು ಸೃಷ್ಟಿಗಳಾಗಿದ್ದಾರೆ. ಈ ಕಲ್ಪನೆಯಿಂದ ಮಾನವನಲ್ಲಿ ವಿನೀತ ಭಾವ ಬೆಳೆಯುತ್ತದೆ. ಇದಕ್ಕೆ ಪ್ರತಿಯಾಗಿ ಹಿಂದೂ ಧರ್ಮದ ಪ್ರಕಾರ ದೇವನು ಮಾತ್ರ ಸತ್ಯವಾಗಿದೆ. ಮಾನವನಿಗೆ ಪ್ರತ್ಯೇಕ ಅಸ್ತಿತ್ವವೆಂಬುದಿಲ್ಲ. ಮಾನವನು ಸ್ವತಃ ದೇವನ ವಿಶಾಲ ಅಸ್ತಿತ್ವದ ಭಾಗವಾಗಿದ್ದಾನೆ. ಈ ಕಲ್ಪನೆ ವಿನೀತಭಾವದ ಬದಲು ಮೇಲರಿಮೆಯನ್ನು ಬೆಳೆಸುತ್ತದೆ. ಇಸ್ಲಾಮಿನ ಏಕದೇವತ್ವ 'ನಾನು ದಾಸನಾಗಿದ್ದೇನೆ' ಎಂಬ ಭಾವವನ್ನು ಹುಟ್ಟಿಸುತ್ತದೆ. ಆದರೆ ಹಿಂದೂ ಧರ್ಮದ ಕಲ್ಪನೆ 'ನಾನು ದೇವನಾಗಿದ್ದೇನೆ' ಎಂಬ ಭಾವವನ್ನು

ಹುಟ್ಟಿಸುತ್ತದೆ. ತನ್ನೊಳಗೆ ಮೇಲರಿಮೆ ಮತ್ತು ಅಹಂಕಾರ ಭಾವವನ್ನು ಹೊಂದಿರುವ ಮಾನವರ ನಡುವೆ ಸಾಮಾಜಿಕ ನ್ಯಾಯದ ವಾತಾವರಣವನ್ನು ಬೆಳೆಸಲು ಯಾವ ರೀತಿಯಲ್ಲೂ ಸಾಧ್ಯವಿಲ್ಲ.

## ಅನುಪಮ ಮಾದರಿಗಳು

ಸುಮಾರು 3 ದಶಕಗಳ ಮೊದಲು ಅಮ್ನೆಷ್ಟಿ ಇಂಟರ್ ನ್ಯಾಶನಲ್(Amnesty International) ಸಂಸ್ಥೆ ಸ್ಥಾಪನೆಗೊಂಡಿತು. ಅದರ ರಾಜಧಾನಿ ಲಂಡನ್‌ನಲ್ಲಿತ್ತು. ಸಂಸ್ಥೆಯನ್ನು 'ಮಾನವ ಹಕ್ಕುಗಳ ಕಾವಲುಗಾರ'(Human Rights Watchdog) ಎಂದು ಭಾವಿಸಲಾಗುತ್ತಿತ್ತು. ಆದರೆ ಈ ತನಕದ ಅವಧಿಯಲ್ಲಿ ಪತ್ರಿಕಾ ವರದಿಗಳನ್ನು ಕೊಡುವುದು ಬಿಟ್ಟರೆ ಯಾವುದೇ ನೈಜ ಸೇವೆಯನ್ನು ಮಾಡಲು ಅದಕ್ಕೆ ಸಾಧ್ಯವಾಗಿಲ್ಲ. ಡಿಸೆಂಬರ್ 1991ಕ್ಕೆ ಸಂಸ್ಥೆ ಮೂವತ್ತು ವರ್ಷಗಳನ್ನು ಪೂರ್ತಿಗೊಳಿಸಿತು.* ಆದರೆ ಸಂಸ್ಥೆಯ ವತಿಯಿಂದ ಆ ಸಂದರ್ಭದಲ್ಲಿ ಯಾವುದೇ ಆಚರಣೆ ನಡೆಯಲಿಲ್ಲ. ಅದರ ಮಹಿಳಾ ಪ್ರತಿನಿಧಿ ಮಿಸ್ ಫ್ರ್ಯಾಂಕಾ ಸುಯಿಟೋ (Ms. Franka Siuto)ರೊಡನೆ, "ಮೂವತ್ತು ವರ್ಷ ಪೂರ್ತಿಗೊಳಿಸಿದ ಸಂದರ್ಭದಲ್ಲಿ ನಿಮ್ಮ ಸಂಸ್ಥೆ ಯಾವುದೇ ಆಚರಣೆ ನಡೆಸುವುದಿಲ್ಲವೇ?" ಎಂದು ಕೇಳಲಾಯಿತು. ಆಗ ಅವರು ಹೇಳಿದರು: "ನಿಜವಾಗಿ ಆಚರಣೆ ಮಾಡಲರ್ಹವಾದ ಯಾವುದೂ ನಮ್ಮ ಬಳಿಯಿಲ್ಲ."

ಪ್ರತಿವರ್ಷ ಡಿಸೆಂಬರ್ 10ಕ್ಕೆ ವಿಶ್ವಸಂಸ್ಥೆಯ ವತಿಯಿಂದ 'ಮಾನವ ಹಕ್ಕುಗಳ ದಿನ'ವನ್ನಾಚರಿಸಲಾಗುತ್ತದೆ. ಈ ವರ್ಷ ವಿಶ್ವಸಂಸ್ಥೆಯ ಕಾರ್ಯದರ್ಶಿ 'ಪೆರೇಝ್ ಡಿ ಕ್ವಯಾರ್'(Peres De Cuellar)ಯವರು ಆ ಸಂದರ್ಭದಲ್ಲಿ ಹೇಳಿಕೆಯೊಂದನ್ನು ಹೊರಡಿಸಿ, ಲೋಕದಾದ್ಯಂತ ಶಕ್ತಿಯ ಅನಿಯಂತ್ರಿತ ಉಪಯೋಗ ಮತ್ತು ಮಾನವರ ಜೊತೆ ತೋರಲಾಗುತ್ತಿರುವ ಕ್ರೌರ್ಯದ ಬಗ್ಗೆ ವಿಷಾದ ವ್ಯಕ್ತಪಡಿಸಿದರು. 43 ವರ್ಷಗಳ ಮೊದಲು ವಿಶ್ವಸಂಸ್ಥೆ ಅಂಗೀಕರಿಸಿದ ವಿಶ್ವ ಮಾನವ ಹಕ್ಕುಗಳ ಕುರಿತಾದ ಪ್ರಕಟಣೆ (Universal Declaration of Human Rights)ಯ ಹೊರತಾಗಿಯೂ ಈಗಲೂ ದೊಡ್ಡ ಪ್ರಮಾಣದಲ್ಲಿ ಮಾನವ ಹಕ್ಕುಗಳ ಉಲ್ಲಂಘನೆಯಾಗುತ್ತಿದೆ ಎಂದು ಅವರು ಹೇಳಿದರು.

* ಈಗ ಐವತ್ತು ವರ್ಷಗಳಾಗಿವೆ. ಅನು

ಶಾಂತಿ ಮತ್ತು ನ್ಯಾಯದ ಸ್ಥಾಪನೆಗೆ ಈ ಸಂಸ್ಥೆಗಳು ವಿಫಲವಾಗಲು ಕಾರಣವೇನು? ಇದಕ್ಕೆ ಮುಖ್ಯವಾದ ಕಾರಣವೇನೆಂದರೆ ಕೇವಲ ಹೇಳಿಕೆ ಅಥವಾ ಪತ್ರಿಕಾ ಪ್ರಕಟಣೆಗಳಿಂದ ನ್ಯಾಯ ಸ್ಥಾಪನೆಗೊಳ್ಳುವುದಿಲ್ಲ. ಅದಕ್ಕೆ ಅನುರೂಪವಾದ ಒಂದು ನೈಜ ಸಿದ್ಧಾಂತದ ಅಗತ್ಯವಿದೆ. ಈ ಸಿದ್ಧಾಂತದ ಆಧಾರದಲ್ಲಿ ಜನರಲ್ಲಿ ವೈಚಾರಿಕ ಕ್ರಾಂತಿಯನ್ನು ತರಬೇಕಾಗಿದೆ. ಅನಂತರ ಈ ಸುಧಾರಿತ ಜನರು ಸಮಾಜದ ಸಂಸ್ಥೆಗಳನ್ನು ಸುಧಾರಿಸಬೇಕಾಗಿದೆ. ಒಂದು ವೇಳೆ ಸರಕಾರ ಅವರ ಕೈಗೆ ಬಂದರೆ ಸರಕಾರದ ಮೂಲಕ ಸಮಾಜದಲ್ಲಿ ಶಾಂತಿ ಮತ್ತು ನ್ಯಾಯವನ್ನು ಅವರು ಸಂಸ್ಥಾಪನೆ ಮಾಡಬೇಕಾಗಿದೆ.

## ಸಮಾನ ನ್ಯಾಯಕ್ಕೆ ಒಂದು ಮಾದರಿ

ಸಾಮಾಜಿಕ ನ್ಯಾಯಕ್ಕೆ ಇಸ್ಲಾಮಿನ ಮೂರನೆಯ ದೊಡ್ಡ ಕೊಡುಗೆಯೆಂದರೆ ಅದು 'ಸಮಾನ ನ್ಯಾಯ'ದ ಒಂದು ಸಮಗ್ರ ಐತಿಹಾಸಿಕ ಮಾದರಿಯನ್ನು ಸ್ಥಾಪಿಸಿತು. ಕೌಟುಂಬಿಕ ಮತ್ತು ಸಾಮಾಜಿಕ ಜೀವನದಿಂದ ಹಿಡಿದು ಸರಕಾರ ಮತ್ತು ಆಡಳಿತದ ಪ್ರತಿಯೊಂದು ಹಂತದಲ್ಲೂ 'ಮಾನವರೆಲ್ಲರೂ ಸಮಾನರೆಂಬ' ನಿಯಮವನ್ನು ವಸ್ತುಶಃ ಸ್ಥಾಪಿಸಿ ಬಿಟ್ಟಿತು. ಮಾನವರೆಲ್ಲರೂ ಒಂದೇ ರೀತಿಯ ಗೌರವಾದರಕ್ಕೆ ಅರ್ಹರು, ಎಲ್ಲ ಮಾನವರೊಂದಿಗೂ ಒಂದೇ ರೀತಿಯಲ್ಲಿ ವ್ಯವಹರಿಸಲಾಗುವುದು. ಅವರೆಷ್ಟೇ ದೊಡ್ಡವರಾಗಿದ್ದರೂ ಚಿಕ್ಕವರಾಗಿದ್ದರೂ ಸರಿ ಎಂಬುದು ಈ ನಿಯಮದ ಮೂಲಭೂತ ಅಂಶಗಳು.

ಇಸ್ಲಾಮೀ ಚರಿತ್ರೆ ಅದರ ವ್ಯಾವಹಾರಿಕ ಉದಾಹರಣೆಗಳಿಂದ ತುಂಬಿದೆ. ಇಸ್ಲಾಮೀ ಚರಿತ್ರೆಯ ಯಾವುದೇ ಗ್ರಂಥದಲ್ಲಿ ಆ ಬಗ್ಗೆ ಓದಬಹುದಾಗಿದೆ. ಇಲ್ಲಿ ನಾವು ಕೆಲವು ಘಟನೆಗಳನ್ನು ಸಂಕ್ಷಿಪ್ತವಾಗಿ ಉಲ್ಲೇಖಿಸುತ್ತೇನೆ.

1. ಝೈನಬ್ ಬಿನ್ತಿ ಜಹಶ್(ಮರಣ ಹಿ.ಶ. 20) ಪ್ರವಾದಿವರ್ಯರ(ಸ) ಸೋದರತ್ತೆಯ ಮಗಳಾಗಿದ್ದರು. ಅವರು ಕುರೈಶರ ಉನ್ನತ ಕುಟುಂಬಕ್ಕೆ ಸೇರಿದವರಾಗಿದ್ದರು. ಹಿಂದಿನ ಕಾಲದಲ್ಲಿ ಯಾವುದೇ ಉನ್ನತ ಕುಟುಂಬದ ಕನ್ಯೆ ಗುಲಾಮ ಮನೆತನದ ಕುವರನೊಂದಿಗೆ ವಿವಾಹವಾಗುವುದನ್ನು ಕಲ್ಪಿಸಲಿಕ್ಕೂ ಸಾಧ್ಯವಿರಲಿಲ್ಲ. ಈ ಕಲ್ಪನೆಯನ್ನು ದೂರೀಕರಿಸಲಿಕ್ಕಾಗಿ ಪ್ರವಾದಿವರ್ಯರು(ಸ)

ಝೈನಬ್‌ರ(ರ) ವಿವಾಹವನ್ನು ಓರ್ವ ಗುಲಾಮನೊಂದಿಗೆ ಮಾಡಬಯಸಿದರು. ಆದ್ದರಿಂದ ಸುಡಾನ್ ಮೂಲದ ಗುಲಾಮರಾದ ಝೈದ್ ಬಿನ್ ಹಾರಿಸರೊಂದಿಗೆ ಅವರು ಝೈನಬ್‌ರ(ರ) ವಿವಾಹ ಮಾಡಿಸಿದರು. ಆ ಕಾಲದ ಮಟ್ಟಿಗೆ ಇದೊಂದು ಅಪೂರ್ವ ಘಟನೆಯಾಗಿತ್ತು. ಏಕೆಂದರೆ ಸ್ವತಂತ್ರ ಕನ್ಯೆಯೊಬ್ಬಳ ವಿವಾಹವನ್ನು ಗುಲಾಮನೊಂದಿಗೆ ಮಾಡುವುದು ಆ ಕಾಲದಲ್ಲಿ ಊಹೆಗೂ ನಿಲುಕದಂತಹ ವಿಚಾರವಾಗಿತ್ತು.

2. ಕಅಬಾ ಅತ್ಯಂತ ಪವಿತ್ರವಾದ ಆರಾಧನಾಲಯವಾಗಿತ್ತು. ಅದರ ತಾರಸಿಯ ಮೇಲೆ ಕುಲೀನ ಮನೆತನದವರು ಮಾತ್ರ ಏರಬಹುದಾಗಿತ್ತು. ಕೆಳಜಾತಿಗೆ ಸೇರಿದ ಒಬ್ಬ ವ್ಯಕ್ತಿ ಕಅಬಾದ ತಾರಸಿಯ ಮೇಲೇರುವುದು ಆ ಕಾಲದಲ್ಲಿ ಯಾರಿಗೂ ಸಹ್ಯವಾಗಿರಲಿಲ್ಲ. ಮಕ್ಕಾ ವಿಜಯವಾದಾಗ ಪ್ರವಾದಿವರ್ಯರು(ಸ) ಈ ಪದ್ಧತಿಯನ್ನು ಮುರಿದರು. ನೀಗ್ರೋ ಗುಲಾಮರಾದ ಬಿಲಾಲ್ ಬಿನ್ ರಬಾಹ್‌ರಿಗೆ ಕಅಬಾದ ತಾರಸಿಯ ಮೇಲೇರುವಂತೆ ಮತ್ತು ಅದಾನ್ ಕೊಡುವಂತೆ ಅವರು ಮೊಟ್ಟ ಮೊದಲು ಆಜ್ಞಾಪಿಸಿದರು. ಇದು ಅರೇಬಿಯಾದ ಇತಿಹಾಸದಲ್ಲಿ ಮಾತ್ರವಲ್ಲದೆ ಜಾಗತಿಕ ಚರಿತ್ರೆಯಲ್ಲೂ ಒಂದು ಅನುಪಮವಾದ ಘಟನೆಯಾಗಿದೆ. ಇಸ್ಲಾಮ್ ಪ್ರಬಲವಾಗದಿರುತ್ತಿದ್ದರೆ 'ಅತಿಕ್ರಮ'ಕ್ಕಾಗಿ ಜನರು ಖಂಡಿತವಾಗಿಯೂ ಹ.ಬಿಲಾಲ್‌ರನ್ನು(ರ) ವಧಿಸಿ ಬಿಡುತ್ತಿದ್ದರು. ಆ ಬಗ್ಗೆ ವ್ಯಕ್ತವಾದ ಪ್ರತಿಕ್ರಿಯೆ ಗಳಿಂದಲೂ ಜನರಿಗೆ ಅದರಿಂದ ಎಷ್ಟು ಅಸಮಾಧಾನವಾಗಿತ್ತೆಂದು ವ್ಯಕ್ತವಾಗುತ್ತದೆ. ಮಕ್ಕಾದ ಉತ್ಬಾ ಬಿನ್ ಉಸೈದ್ ಎಂಬವನು ಹೇಳಿದನು, "ನನ್ನ ತಂದೆ ಸತ್ತದ್ದು ಒಳ್ಳೆಯದಾಯಿತು. ಇಂದು ಈ ಘಟನೆಯನ್ನು ನೋಡಲು ಅವರು ಬದುಕುಳಿದಿಲ್ಲ" ಹಾರಿಸ್ ಬಿನ್ ಹಿಷಾಮ್ ಎಂಬವನು ಹೇಳಿದನು "ಮುಹಮ್ಮದ್‌ನಿಗೆ ಈ ಕರಿಕಾಗೆಯಲ್ಲದೆ ಬೇರೆ ಅದಾನ್ ಕೊಡುವವರು ಸಿಗಲಿಲ್ಲವೇ?"

3. ನಾಲ್ಕನೇ ಖಲೀಫಾ ಅಲೀ ಬಿನ್ ಅಬೀತಾಲಿಬ್‌ರ ಯುದ್ಧ ಉಡುಗೆ ಕಾಣೆಯಾಯಿತು. ಅನಂತರ ಅದು ಕೂಫಾದ ಕ್ರೈಸ್ತನೊಬ್ಬನ ಬಳಿ ಇರುವುದು ತಿಳಿದು ಬಂತು. ಈ ಬಗ್ಗೆ ಮೊಕದ್ದಮೆ ಆಗಿನ ಕಾಝಿ ಶುರೈಹ್ ಬಿನ್ ಹಾರಿಸ್‌ರ ನ್ಯಾಯಾಲಯದ ಮುಂದೆ ಬಂತು. ಅಲೀ ಬಿನ್ ಅಬೀತಾಲಿಬ್ ಸಾಮಾನ್ಯ ಪ್ರಜೆಯಂತೆ ನ್ಯಾಯಾಲಯದ ಮುಂದೆ ಹಾಜರಾದರು. ಅಲೀ(ರ) ತಮ್ಮ

ಮಗನನ್ನು ಸಾಕ್ಷಿಯಾಗಿ ನಿಲ್ಲಿಸಿದರು. ಆದರೆ ತಂದೆಯ ಪರವಾಗಿ ಮಗನ ಸಾಕ್ಷಿ ಸ್ವೀಕಾರಾರ್ಹವಲ್ಲ ಎಂದು ಕಾಝಿ ಅದನ್ನು ನಿರಾಕರಿಸಿ ಬಿಟ್ಟರು.

ಕಾಲದ ಖಲೀಫಾ ಮೊಕದ್ದಮೆಯಲ್ಲಿ ಸೋತರು. ಆದರೆ ಇದರಿಂದ ಆ ಕ್ರೈಸ್ತ ವ್ಯಕ್ತಿ ಬಹಳ ಪ್ರಭಾವಿತನಾದನು. ಇಸ್ಲಾಮೀ ನ್ಯಾಯಾಲಯದಲ್ಲಿ ಖಲೀಫಾ ಮತ್ತು ಸಾಮಾನ್ಯ ಪ್ರಜೆಯೊಂದಿಗೆ ಒಂದೇ ರೀತಿಯಲ್ಲಿ ವ್ಯವಹರಿಸಲಾಗುವುದನ್ನು ಕಂಡು ಅವನು ಮನಸೋತನು. ತಕ್ಷಣವೇ ಅವನು ಅಲೀ ಬಿನ್ ಅಬೀತಾಲಿಬ್ ಹೇಳುತ್ತಿರುವುದು ಸತ್ಯ. ಈ ಯುದ್ಧ ಉಡುಗೆ ಅವರಿಗೇ ಸೇರಿದ್ದು, ನನ್ನದಲ್ಲ ಎಂದು ಒಪ್ಪಿಕೊಂಡನು.

4. ಎರಡನೆಯ ಖಲೀಫಾ ಹ. ಉಮರ್ ಫಾರೂಕ್‌ರ(ರ) ಕಾಲದ ಒಂದು ಘಟನೆ. ಈಜಿಪ್ಟ್‌ನ ರಾಜ್ಯಪಾಲ ಅಮ್ರ್ ಬಿನ್ ಅಸ್‌ರ ಮಗ ಮುಹಮ್ಮದ್ ಬಿನ್ ಅಮ್ರ್ 'ಕಿಬ್ತಿ'ಯೊಬ್ಬನ ಬಗ್ಗೆ ಕೋಪಗೊಂಡು ಅವನಿಗೊಂದು ಕೊರಡೆ ಯೇಟು ಬಾರಿಸಿದನು. ಈ ಕಿಬ್ತಿ ಈಜಿಪ್ಟ್‌ನಿಂದ ನಡೆದುಕೊಂಡೇ ಮದೀನಾಕ್ಕೆ ಬಂದು ಉಮರ್‌ರ(ರ) ಮುಂದೆ ತನ್ನ ಅಹವಾಲನ್ನಿಟ್ಟನು. ಉಮರ್ ಫಾರೂಕ್(ರ) ಆ ಬಗ್ಗೆ ವಿಚಾರಣೆ ನಡೆಸಿದಾಗ ಮುಹಮ್ಮದ್ ಬಿನ್ ಅಮ್ರ್ ಅವನಿಗೆ ವಿನಾ ಕಾರಣ ಹೊಡೆದಿದ್ದನೆಂದು ತಿಳಿದು ಬಂತು. ಅವರು ತಕ್ಷಣವೇ ತಮ್ಮ ಜನ ಕಳುಹಿಸಿ ಈಜಿಪ್ಟ್‌ನಿಂದ ಅಲ್ಲಿನ ರಾಜ್ಯಪಾಲ ಮತ್ತು ಅವನ ಮಗನನ್ನು ಕರೆಸಿದರು. ಅವರು ಬಂದು ಹಾಜರಾದ ನಂತರ ರಾಜ್ಯಪಾಲ ಮಗನಿಗೆ ಹೊಡೆಯುವಂತೆ ಕಿಬ್ತಿಗೆ ಆದೇಶಿಸಿದರು.

ಕಿಬ್ತಿ ರಾಜ್ಯಪಾಲರ ಉಪಸ್ಥಿತಿಯಲ್ಲಿ ಅವರ ಮಗನಿಗೆ ಹೊಡೆಯ ಲಾರಂಭಿಸಿದನು. ಎಲ್ಲಿಯವರೆಗೆಂದರೆ ಅವನು ರಕ್ತದಲ್ಲಿ ಮಿಂದು ಬಿಟ್ಟನು. ಹೊಡೆದು ಮುಗಿಸಿದಾಗ ಉಮರ್ ಫಾರೂಕ್(ರ) ಅಮ್ರ್ ಬಿನ್ ಆಸ್ ಮತ್ತು ಮುಹಮ್ಮದ್ ಬಿನ್ ಅಮ್ರ್‌ನನ್ನುದ್ದೇಶಿಸಿ, "ನೀವು ಎಂದಿನಿಂದ ಜನರನ್ನು ಗುಲಾಮರನ್ನಾಗಿ ಮಾಡಿದ್ದೀರಿ. ಅವರ ತಾಯಂದಿರಾದರೋ ಅವರನ್ನು ಸ್ವತಂತ್ರವಾಗಿ ಹಡೆದಿದ್ದರು" ಎಂದು ಹೇಳಿದರು.

5. ಹ. ಉಮರ್ ಫಾರೂಕ್‌ರ(ರ) ಖಿಲಾಫತ್‌ನ ಕಾಲದಲ್ಲಿ ಫೆಲೆಸ್ತೀನ್‌ನ ವಿಜಯವಾಯಿತು. ಜಯಿಸಲ್ಪಟ್ಟವರೊಂದಿಗೆ ಒಪ್ಪಂದ ಮಾಡಲು ಖಲೀಫಾ ಸ್ವತಃ

ಫೆಲೆಸ್ತೀನ್‌ಗೆ ಬರುವುದೆಂದು ತೀರ್ಮಾನವಾಯಿತು. ಉಮರ್ ಫಾರೂಕ್(ರ) ಮದೀನಾದಿಂದ ಹೊರಟಿದ್ದರು. ಅವರು ಸಾಮಾನ್ಯ ಉಡುಗೆ-ತೊಡುಗೆ, ಒಬ್ಬ ಸೇವಕ ಮತ್ತು ಒಂದು ಒಂಟೆಯ ಜತೆ ಹೊರಟಿದ್ದರು. ಅವರು ಸೇವಕರೊಡನೆ ಹೇಳಿದರು, "ನಾನೊಬ್ಬನೇ ಒಂಟೆಯ ಮೇಲೆ ಕುಳಿತಿದ್ದು ನೀವು ನಡೆದುಕೊಂಡು ಬರುವುದಾದರೆ ಅದು ನಿಮಗೆ ಅನ್ಯಾಯ ಮಾಡಿದಂತೆ. ನೀವು ಒಂಟೆಯ ಮೇಲೆ ಕುಳಿತು ನಾನು ನಡೆದುಕೊಂಡು ಸಾಗಿದರೆ ನನ್ನ ಮೇಲೆ ಅನ್ಯಾಯವಾದಂತೆ. ನಾವಿಬ್ಬರೂ ಒಂಟೆಯ ಮೇಲೆ ಕುಳಿತರೆ ಒಂಟೆಗೆ ಅನ್ಯಾಯ ಮಾಡಿದಂತೆ. ಆದ್ದರಿಂದ ನಾವು ಮೂರು ಸರದಿಯನ್ನು ನಿಶ್ಚಯಿಸಿಕೊಳ್ಳೋಣ."

ಅದರಂತೆ ಸರದಿ ನಿಶ್ಚಯವಾಯಿತು. ಒಮ್ಮೆ ಉಮರ್ ಫಾರೂಕ್(ರ) ಕುಳಿತಿದ್ದರೆ ಸೇವಕ ನಡೆದುಕೊಂಡು ಸಾಗುತ್ತಿದ್ದ. ಅನಂತರ ಸೇವಕ ಕುಳಿತರೆ ಉಮರ್ ಫಾರೂಕ್(ರ) ನಡೆದುಕೊಂಡು ಹೋಗುತ್ತಿದ್ದರು. ಅನಂತರ ಒಂಟೆ ಖಾಲಿ ಇದ್ದು ಇಬ್ಬರೂ ನಡೆದುಕೊಂಡು ಸಾಗುತ್ತಿದ್ದರು. ಹೀಗೆ ಫೆಲೆಸ್ತೀನ್‌ಗೆ ತಲಪುವಾಗ ಉಮರ್ ಫಾರೂಕ್(ರ) ನಡೆದುಕೊಂಡು ಸಾಗಿದ್ದರು. ಸೇವಕ ಒಂಟೆಯ ಮೇಲಿದ್ದ.

ಹೀಗೆ ಇಸ್ಲಾಮ್ ವೈಚಾರಿಕ ಕ್ರಾಂತಿಯ ಜತೆಗೆ ವ್ಯಾವಹಾರಿಕ ಉದಾಹರಣೆಗಳನ್ನೂ ಮುಂದಿಟ್ಟಿತು. ಇಂತಹ ಇತಿಹಾಸದಿಂದ ಲೋಕದ ಸರಿಸುಮಾರು ಸಮಸ್ತ ಭಾಗ ಪ್ರಭಾವಿತವಾಯಿತು. ಇದು ಎಷ್ಟು ಪ್ರಬಲವಾದ ಕ್ರಾಂತಿಯಾಗಿತ್ತೆಂದರೆ ಸಾವಿರ ವರ್ಷಗಳ ನಂತರವೂ ಅದರ ಪ್ರಭಾವ ಕಡಿಮೆಯಾಗಿರಲಿಲ್ಲ.

## ಸಮಾನ ಕಾನೂನು ಜಾರಿಗೊಳಿಸಿದ 'ಕ್ರಾಂತಿ'

ಪ್ರವಾದಿವರ್ಯರ(ಸ) ನಂತರ ಅವರ ಸಂಗಾತಿಗಳು ಮತ್ತು ತಾಬಿಈಗಳ ಕಾಲ ಇಸ್ಲಾಮಿನ ಸುವರ್ಣ ಯುಗವಾಗಿದೆ. ಆ ಕಾಲದಲ್ಲಿ ಇಸ್ಲಾಮೀ ಮೌಲ್ಯಗಳು ಸಂಪೂರ್ಣವಾಗಿ ಸಮಾಜವನ್ನಾವರಿಸಿಕೊಂಡಿತ್ತು. ನಂತರದ ಜನಾಂಗಗಳಲ್ಲಿ ಈ ಕ್ರಾಂತಿಯ ಪ್ರಭಾವ ಕಡಿಮೆಯಾದಾಗಲೂ ಸಮಾಜದಲ್ಲಿ ಯಾವುದೇ ರೀತಿಯ ಮೂಲಭೂತ ಬದಲಾವಣೆಯಾಗಲಿಲ್ಲ. ಎಲ್ಲಿಯವರೆಗೆಂದರೆ ಮುಸ್ಲಿಮ್ ರಾಜರುಗಳಿಗೂ ಈ ನಿಯಮವನ್ನು ಮೀರುವ ಧೈರ್ಯವಿರಲಿಲ್ಲ.

ಇಸ್ಲಾಮಿನ ಮೂಲಕ ಬಂದ ಏಕದೇವತ್ವದ ಕ್ರಾಂತಿಯಿಂದಾಗಿ ದೇವನೇ ಪ್ರಭು ಮತ್ತು ಮಾನವರೆಲ್ಲರೂ ಅವನ ದಾಸರು ಎಂಬ ಭಾವನೆಯನ್ನು ಅತ್ಯಂತ ಶಕ್ತಿಯುತವಾಗಿ ಜನರ ಮನಸ್ಸಿನಲ್ಲಿ ನೆಲೆಯೂರುವಂತೆ ಮಾಡಿತು. ಸಂಪತ್ತು ಅಥವಾ ಅಧಿಕಾರದ ಮೂಲಕ ಯಾರಿಗೂ ತಾನು ಇತರರಿಗಿಂತ ಉನ್ನತನೆಂದು ಭಾವಿಸಲು ಸಾಧ್ಯವಿರಲಿಲ್ಲ. ಹಿಂದಿನ ಇತಿಹಾಸದಲ್ಲಿ ಕಂಡು ಬರುತ್ತಿದ್ದ ಇಂತಹ ಉದಾಹರಣೆಗಳು ಕೊನೆಗೊಂಡವು.

ನಸರ್ ಬಿನ್ ಅಹ್ಮದ್ ಬಿನ್ ಅಸದ್ ಬಿನ್ ಸಾಮಾನ್(ಮರಣ ಹಿ.ಶ. 279) ಸಾಮಾನಿಯಾ ಸಾಮ್ರಾಜ್ಯದ(Samanids) ಸ್ಥಾಪಕನಾಗಿದ್ದನು. ಈ ಸರಕಾರ ಮಾವರಾ ಅನ್ನಹರ್‌ದಲ್ಲಿ(Transoxamia) ಕ್ರಿ.ಶ. 819ರಿಂದ 999ರ ತನಕ ಅಸ್ತಿತ್ವದಲ್ಲಿತ್ತು.

ಸುಲ್ತಾನ್ ನಸ್ರ್ ನೇಶಾಪುರವನ್ನು ಗೆದ್ದುಕೊಂಡ. ಅದನ್ನು ತನ್ನ ಸಾಮ್ರಾಜ್ಯದಲ್ಲಿ ಸೇರಿಸುವಾಗ ಭವ್ಯ ರಾಜದರಬಾರದೊಂದನ್ನು ಜಮಾಯಿಸಿದನು. ಪದಗ್ರಹಣ ಸಮಾರಂಭದ ಆರಂಭದಲ್ಲಿ ಹಾಫಿಝ್ ಒಬ್ಬರು ಕುರ್‌ಆನ್ ವಾಚನ ಮಾಡಿದರು. ಅವರು ಕುರ್‌ಆನ್ ವಾಚಿಸುತ್ತಾ, **"ಎಲ್ಲರೂ ಬಹಿರಂಗವಾಗಿ ಬಿಡುವ ಆ ದಿನ ಅವರ ಯಾವ ವಿಷಯವೂ ಅಲ್ಲಾಹನಿಂದ ಅಡಗಿರಲಾರದು. ಇಂದು ಪ್ರಭುತ್ವ ಯಾರದು? (ಎಂದು ಆ ದಿನ ಕೂಗಿ ಕೇಳಲಾಗುವುದು) ಏಕೈಕನೂ ಅಜೇಯನೂ ಆದ ಅಲ್ಲಾಹನದು(ಎಂದು ಇಡೀ ವಿಶ್ವವು ಕೂಗಿ ಹೇಳುವುದು)"-(ಸೂರಃ ಅಲ್ ಮೂಮಿನ್-16)** ಎಂಬ ಸೂಕ್ತಕ್ಕೆ ತಲಪಿದರು. ಆಗ ಸುಲ್ತಾನ್ ಭಯದಿಂದ ಕಂಪಿಸಿದನು. ಭಾವ ಪರವಶನಾಗಿ ಅವನು ಸಿಂಹಾಸನದಿಂದ ಕೆಳಗಿಳಿದನು. ತನ್ನ ತಲೆಯಿಂದ ಕಿರೀಟವನ್ನು ತೆಗೆದು ಸಾಷ್ಟಾಂಗವೆರಗಿದನು ಮತ್ತು ಹೇಳಿದನು, "ನನ್ನ ಪ್ರಭುವೇ! ನಿಶ್ಚಯವಾಗಿಯೂ ಪ್ರಭುತ್ವ ನಿನಗೇ ಮೀಸಲು. ಅದು ನನಗೆ ಸೇರಿದ್ದಲ್ಲ."

ಪುರಾತನ ಕಾಲ ರಾಜರುಗಳ ಸರ್ವಾಧಿಕಾರದ ಕಾಲವಾಗಿತ್ತು. ಆ ಕಾಲದಲ್ಲಿ ರಾಜನ ಮೇಲ್ಮೆ ಮತ್ತು ಉಳಿದೆಲ್ಲ ಪ್ರಜೆಗಳ ಕೀಳು ಭಾವನೆ ಸಮಾಜವನ್ನಾವರಿಸಿ ಕೊಂಡಿರುತ್ತಿತ್ತು. ಸಂಭವಿಸುವ ಎಲ್ಲಾ ಘಟನೆಗಳ ಮೇಲೂ ಈ ಭಾವನೆಯ ಪ್ರಭಾವವಿರುತ್ತಿತ್ತು. ಆದರೆ ಇಸ್ಲಾಮೀ ಕ್ರಾಂತಿಯು ವ್ಯಕ್ತಿಯ ಮೇಲ್ಮೆಯನ್ನು

ಕೊನೆಗೊಳಿಸಿತು. ಅದು ಮಾನವೀಯ ಸಮಾನತೆಯ ಕಲ್ಪನೆಗೆ ಸ್ಥಿರವಾದ ಐತಿಹಾಸಿಕ ಆಧಾರವನ್ನೊದಗಿಸಿತು. ಮಾನವನ ಪ್ರತಿಯೊಂದು ಕರ್ಮದ ಮೇಲೂ ಇದರ ಪ್ರಭಾವವುಂಟಾಯಿತು.

ಸಮಸ್ತ ಇಸ್ಲಾಮಿ ಇತಿಹಾಸ ಇಂತಹ ಘಟನೆಯಿಂದ ತುಂಬಿದೆ. ಇಲ್ಲಿ ಪ್ರಸ್ತುತ ವಿಷಯಕ್ಕೆ ಸಂಬಂಧಿಸಿದಂತೆ ಇಸ್ಲಾಮಿ ಇತಿಹಾಸದ ಕೊನೆಯ ಕಾಲದ ಘಟನೆಯೊಂದನ್ನು ನಾನು ಪ್ರಸ್ತಾವಿಸಬಯಸುತ್ತೇನೆ. ಮೊಗಲ್ ದೊರೆಯಾದ ಜಹಾಂಗೀರ್‌ನ ಕಾಲದ ಘಟನೆ. ಈ ಘಟನೆಯನ್ನು ಇಸ್ಲಾಮಿ ಇತಿಹಾಸಜ್ಞರಾದ ಶಿಬ್ಲಿ ನುಅ್‌ಮಾನಿ 'ಜಹಾಂಗೀರನ ನ್ಯಾಯ'(ಅದ್ಲೆ ಜಹಾಂಗೀರಿ) ಎಂಬ ಶಿರೋನಾಮೆಯಲ್ಲಿ ಒಂದು ಪದ್ಯದ ಮೂಲಕ ವಿವರಿಸಿದ್ದಾರೆ. ಅದರ ಸಾರಾಂಶ ಹೀಗಿದೆ.

ಜಹಾಂಗೀರ್‌ನ ಆಡಳಿತ ಕಾಲದಲ್ಲಿ ರಾಣಿ ನೂರ್‌ಜಹಾನ್ ಬಡ ನಿರ್ದೋಷಿ ಯಾತ್ರಿಕನೊಬ್ಬನಿಗೆ ಹೊಡೆದಾಗ ಅವನು ಸತ್ತು ಹೋದನು. ಈ ವಿಷಯ ಇಸ್ಲಾಮಿ ನ್ಯಾಯಾಲಯದ ಮುಂದೆ ಬಂತು. ಕಾಝಿ ಕೊಲೆಗೆ ಪ್ರತಿಯಾಗಿ ರಾಣಿಯನ್ನು ಕೊಲ್ಲಬೇಕೆಂದು ಆದೇಶಿಸಿದರು. ಜಹಾಂಗೀರ್‌ನಿಗೆ ರಾಣಿಯ ಮೇಲೆ ಅತ್ಯಂತ ಪ್ರೀತಿಯಿತ್ತಾದರೂ ಅವನು ನ್ಯಾಯಾಲಯದ ತೀರ್ಮಾನವನ್ನು ಮೀರುವಂತಿರಲಿಲ್ಲ. ಅವನು ರಾಣಿಯನ್ನು ಬಂಧಿಸುವಂತೆ ಮತ್ತು ಕಟುಕರಿಗೆ ಒಪ್ಪಿಸುವಂತೆ ಆದೇಶ ಹೊರಡಿಸಿದನು. ರಾಣಿ ಆ ಹೊತ್ತಿಗೆ ಸಂದೇಶವೊಂದನ್ನು ರಾಜನಿಗೆ ಕಳುಹಿಸಿ 'ಪರಿಹಾರ ಧನ'ವನ್ನು ಪಡೆಯುವ ಅವಕಾಶವೂ ಶರೀಅತ್‌ನಲ್ಲಿದೆಯಲ್ಲಾ ಎಂಬುದನ್ನು ಜ್ಞಾಪಿಸಿದಳು. ಮೃತನ ಪತ್ನಿ ಮಕ್ಕಳಿಗೆ ಒಪ್ಪಿಗೆಯೆಂದಾದರೆ ಪರಿಹಾರಧನ ಕೊಟ್ಟು ಆರೋಪಿಯನ್ನು ಖುಲಾಸೆ ಮಾಡಬಹುದೆಂದು ನ್ಯಾಯಾಧೀಶರು ತೀರ್ಪಿತ್ತರು. ನಂತರ 'ಪರಿಹಾರ ಧನ ತೆತ್ತು' ರಾಣಿ ನೂರ್ ಜಹಾನ್ ಮರಣ ದಂಡನೆಯಿಂದ ಪಾರಾದಳು.

ಇದಕ್ಕೆ ಪ್ರತಿಯಾಗಿ ಇನ್ನೊಂದು ಉದಾಹರಣೆಯನ್ನು ನೋಡಿ. ಭಾರತೀಯ ಆಡಳಿತಗಾರನಾದ ಜಹಾಂಗೀರ್‌ನ ಸಮಕಾಲೀನ ಬ್ರಿಟಿಷ್ ದೊರೆ ಮೊದಲನೆಯ ಜೇಮ್ಸ್(ಕ್ರಿ.ಶ. 1566-1625) ಆಗಿದ್ದ. ಅವನು ತನ್ನನ್ನು ಕಾನೂನಿಗಿಂತ ಮಿಗಿಲಾದವನು ಎಂದು ಭಾವಿಸುತ್ತಿದ್ದ. ನಾನು ವೈಯಕ್ತಿಕ ಅಭಿಪ್ರಾಯದಂತೆ

ಏನನ್ನು ಬೇಕಾದರೂ ಮಾಡಬಹುದೆಂಬುದು ಅವನ ಅಭಿಪ್ರಾಯವಾಗಿತ್ತು. ಆದ್ದರಿಂದ ಆ ಕಾಲದ ಬ್ರಿಟಿಷ್ ಚೀಫ್ ಜಸ್ಟಿಸ್ ಸರ್ ಎಡ್‌ವರ್ಡ್ ಕೋಕ್(ಕ್ರಿ.ಶ. 1552-1634) ಅವನ ಬಗ್ಗೆ ತೀವ್ರ ಭಿನ್ನಮತ ವ್ಯಕ್ತಪಡಿಸಿದರು. ಘಟನೆ ಹೀಗಿದೆ.

ಜಾನ್ ಬೇಟ್(John Bate) ಎಂಬ ಬ್ರಿಟಿಷ್ ವರ್ತಕನೊಬ್ಬನಿದ್ದ. ಅವನು ಆಮದಿತ ಒಣ ದ್ರಾಕ್ಷಿಗೆ ತೆರಿಗೆ ಕೊಡಲು ನಿರಾಕರಿಸಿದ. ಏಕೆಂದರೆ ಪಾರ್ಲಿಮೆಂಟಿನ ಮೂಲಕ ಆ ನಿಯಮ ಜಾರಿಗೊಂಡಿರಲಿಲ್ಲ. ಅದು ಮೊದಲನೇ ಜೇಮ್ಸ್‌ನ ವೈಯಕ್ತಿಕ ಆದೇಶವಾಗಿತ್ತು. ಜಸ್ಟಿಸ್ ಕೋಕ್ ಜಾನ್ ಬೇಟ್‌ನ ನಿಲುವನ್ನು ಸಮರ್ಥಿಸಿದರು. ಇದರಿಂದ ರಾಜನಿಗೆ ಸಿಟ್ಟು ಬಂತು. "ನಾನು ಕಾನೂನಿಗೆ ಒಳಪಟ್ಟವನಾಗಿದ್ದೇನೆಯೇ. ಇದು ಮಹಾಮೋಸ' ಎಂದು ಅವನು ಹೇಳಿದ.

ಜಸ್ಟಿಸ್ ಕೋಕ್ ತಮ್ಮ ಅಭಿಪ್ರಾಯಕ್ಕೆ ಬದ್ಧವಾಗಿದ್ದರು. ಇದರಿಂದಾಗಿ ರಾಜ ಅವರನ್ನು ಜಸ್ಟಿಸ್ ಪದವಿಯಿಂದ ಪದಚ್ಯುತಗೊಳಿಸಿದನು. ಅದರ ಬಗ್ಗೆ ಇತಿಹಾಸದಲ್ಲಿ 'ರಾಜನ ಜತೆಗಾದ ಅಭಿಪ್ರಾಯ ಭಿನ್ನತೆಯಿಂದಾಗಿ ಅವರು ತಮ್ಮ ಹುದ್ದೆಯನ್ನು ತೊರೆಯಬೇಕಾಯಿತು" ಎಂದು ಹೇಳಲಾಗಿದೆ.

ರಾಜ ಮತ್ತು ಜಸ್ಟಿಸ್‌ರ ನಡುವಿನ ಈ ಪ್ರಕರಣ ಉನ್ನತ ಆಯೋಗದ ಮುಂದೆ ಬಂದಾಗ ಅಟಾರ್ನಿ ಜನರಲ್ ಫ್ರಾನ್ಸಿಸ್ ಬೇಕನ್(Francis Bacon) ರಾಜನ ಕಾನೂನು ಪರ ಮೇಲ್ಮೆಯನ್ನು ಸಮರ್ಥಿಸುತ್ತಾ ಹೇಳಿದರು, "ನ್ಯಾಯಮೂರ್ತಿಗಳು ಸಿಂಹದಂತಿರಬೇಕಾಗಿದೆ. ಆದರೆ ರಾಜನ ಅಧೀನದಲ್ಲಿರುವ ಸಿಂಹದಂತೆ."

ಹಿಂದಿನ ಎಲ್ಲಾ ಕಾಲಗಳಲ್ಲಿ ಎರಡು ವಿಧದ ಕಾನೂನುಗಳಿದ್ದುವು. ಬ್ರಿಟಿಷರ ಕಾನೂನು ಪಾರಿಭಾಷಿಕದಲ್ಲಿ ಅದನ್ನು ಜನಸಾಮಾನ್ಯರ ಕಾನೂನು(Common Law) ಮತ್ತು ರಾಜ ಕಾನೂನು (Royal Prerogative) ಎಂದು ಕರೆಯಲಾಗುತ್ತಿದೆ. ಹೀಗೆ ಜನಸಾಮಾನ್ಯರಿಗೊಂದು ಮತ್ತು ರಾಜ ಹಾಗೂ ರಾಜ ಕುಟುಂಬದವರಿಗೆ ಇನ್ನೊಂದು ಕಾನೂನು ಅಸ್ತಿತ್ವದಲ್ಲಿತ್ತು. ರಾಜ ಎಲ್ಲಾ ಕಾನೂನುಗಳಿಗಿಂತಲೂ ಮಿಗಿಲಾದವನಾಗಿದ್ದ. ನಮಗೆ ತಿಳಿದಿರುವ ಇತಿಹಾಸದ ಆಧಾರದಲ್ಲಿ ಹೇಳುವುದಾದರೆ ಈ ಸ್ಥಾಪಿತ ಕಾನೂನುಗಳನ್ನು ಮುರಿದು ಎಲ್ಲರಿಗೂ ಸಮಾನವಾಗಿ ಅನ್ವಯವಾಗುವ

ಕಾನೂನನ್ನು ಮೊಟ್ಟ ಮೊದಲು ಜಾರಿಗೊಳಿಸಿದ ಕೀರ್ತಿ ಇಸ್ಲಾಮಿಗೆ ಸಲ್ಲುತ್ತದೆ. ಇಸ್ಲಾಮ್ ರಾಜಾಡಳಿತವನ್ನು(Rule of King) ಕೊನೆಗೊಳಿಸಿ ಕಾನೂನಿನ ಆಡಳಿತವನ್ನು(Rule of Law) ಜಾರಿಗೊಳಿಸಿತು.

## ಅಸಮಾನತೆಯ ಮೂಲೋತ್ಪಾಟನೆ

ಪ್ರವಾದಿವರ್ಯರು(ಸ) ತಮ್ಮ ಜೀವಿತದ ಕೊನೆಯ ವರ್ಷದಲ್ಲಿ ಹಜ್ಜ್ ನಿರ್ವಹಿಸಿದರು. ಆ ಸಂದರ್ಭದಲ್ಲಿ ಅವರು 'ಹಜ್ಜತುಲ್ ವಿದಾ' (ವಿದಾಯ ಹಜ್ಜ್) ಎಂದು ಖ್ಯಾತವಾಗಿರುವ ಭಾಷಣವನ್ನು ಮಾಡಿದರು. ಆಗ ಅವರು ಮಾಡಿದ ಐತಿಹಾಸಿಕ ಪ್ರಕಟಣೆಗಳಲ್ಲಿ ಇದೂ ಒಂದಾಗಿತ್ತು.

"ಕೇಳಿರಿ! ಅಜ್ಞಾನ ಕಾಲದ ಎಲ್ಲಾ ವಿಷಯಗಳನ್ನೂ ನನ್ನ ಪಾದದಲ್ಲಿ ನಾಶಗೊಳಿಸಲಾಗಿದೆ."

ಈ ಪದಗಳ ಮೂಲಕ ಅವರು ಹೊಸ ಕಾಲವೊಂದರ ಬಗ್ಗೆ ಪ್ರಕಟಣೆ ಹೊರಡಿಸಿದ್ದರು. ಅಲ್ಲಾಹನ ಸಹಾಯದಿಂದ ಅವರ ಮೂಲಕ ಅದು ಮಾನವ ಚರಿತ್ರೆಯಲ್ಲಿ ಗೋಚರಿಸಿತು. ತದನಂತರ ಯಾವುದೇ ರೀತಿಯ ಅಜ್ಞಾನಜನ್ಯ ರೀತಿನೀತಿಗಳು ಮಾನವ ಸಮಾಜದಲ್ಲಿ ರೂಢಮೂಲವಾಗಲು ಸಾಧ್ಯವೇ ಇಲ್ಲದಂತಹ ಬೆಳವಣಿಗೆಗಳು ಅವರಿಂದಾಗಿ ಮಾನವ ಚರಿತ್ರೆಯಲ್ಲಿ ಮೂಡಿತು.

ಇಸ್ಲಾಮ್ ಅರೇಬಿಯಾದಿಂದ ಹೊರಟು ವಿವಿಧ ದೇಶಗಳಲ್ಲಿ ಹರಡಿತು. ಲೋಕದ ದೊಡ್ಡ ಭಾಗ ಇಸ್ಲಾಮಿನ ಅನುಯಾಯಿಗಳ ಅಧೀನವಾಯಿತು. ಆದರೆ ಯಾವ ಪ್ರದೇಶದಲ್ಲೂ ಇತರ ಜನಾಂಗ ಮತ್ತು ನಾಗರಿಕತೆಗಳಲ್ಲಿ ಬೆಳೆದಂತಹ ಜನಾಂಗ ಪಕ್ಷಪಾತ ಬೆಳಕಿಗೆ ಬರಲಿಲ್ಲ. ಆ ಕಾಲದಲ್ಲೇ ಆಫ್ರಿಕಾದ ಹೆಚ್ಚಿನ ಜನರು ಇಸ್ಲಾಮ್ ಸ್ವೀಕಾರ ಮಾಡಿದರು. ಅವರೆಲ್ಲರೂ ಕರಿಯರಾಗಿದ್ದರು. ಇಸ್ಲಾಮಿಗಿಂತ ಮೊದಲು ಅವರನ್ನು ಹುಟ್ಟು ಗುಲಾಮರೆಂದು ಪರಿಗಣಿಸಲಾಗುತ್ತಿತ್ತು. ಆದರೆ ಇಸ್ಲಾಮಿನ ಆಗಮನದ ನಂತರ ಅವರೊಂದಿಗಿನ ಪಕ್ಷಪಾತಿ ಧೋರಣೆ ಕೊನೆಗೊಂಡಿತು. ಇಸ್ಲಾಮಿಗೆ ಪ್ರವೇಶಿಸಿದ ನಂತರ ಅವರೂ ಇತರರಂತೆ ಇಸ್ಲಾಮೀ ಭ್ರಾತೃತ್ವದ ಸದಸ್ಯರಾದರು.

ಎನ್‌ಸೈಕ್ಲೋಪಿಡಿಯಾ ಬ್ರಿಟಾನಿಕಾ(1984)ದ ಲೇಖಕ ಆಫ್ರಿಕಾ ಮತ್ತು ಇತರ ಭಾಗದಲ್ಲಿ ಇಸ್ಲಾಮಿನ ಪ್ರಸಾರವನ್ನು ಪ್ರಸ್ತಾವಿಸುತ್ತಾ ಈ ಐತಿಹಾಸಿಕ ವಾಸ್ತವಿಕತೆಯನ್ನು ಸಮ್ಮತಿಸುತ್ತಾನೆ. ಅದರಲ್ಲಿ ಹೀಗೆನ್ನಲಾಗಿದೆ. "ಮುಸ್ಲಿಮ್ ರಾಷ್ಟ್ರಗಳ ಪೈಕಿ ಎಲ್ಲಿಯೂ ಜನಾಂಗಭೇದದ ಆಧಾರದಲ್ಲಿ ಜಾತಿ ಪದ್ಧತಿ ಸ್ಥಾಪನೆಗೊಳ್ಳಲಿಲ್ಲ."

ವಾಸ್ತವದಲ್ಲಿ ಇಸ್ಲಾಮಿನ ಉಗಮ, ಲೋಕದಲ್ಲಿ ಸಾಮಾಜಿಕ ಕ್ರಾಂತಿಯೊಂದರ ಉಗಮವಾಗಿತ್ತು. ಮೊದಲು ಅರೇಬಿಯಾ ಮತ್ತು ಸುತ್ತಮುತ್ತಲಿನ ಪ್ರದೇಶದಲ್ಲಿ ಈ ಐತಿಹಾಸಿಕ ಬದಲಾವಣೆ ಅಸ್ತಿತ್ವಕ್ಕೆ ಬಂತು. ಅನಂತರ ಲೋಕದಾದ್ಯಂತ ಅದರ ಪರಿಣಾಮ ಗೋಚರಿಸಿತು. ಇದರ ಪರಿಣಾಮವಾಗಿ ಸ್ವತಂತ್ರರು ಮತ್ತು ಗುಲಾಮರು ಎಂಬ ಕಲ್ಪನೆ ಶಾಶ್ವತವಾಗಿ ಭೂಮುಖದಿಂದ ಕೊನೆಗೊಂಡಿತು. ಈ ಕ್ರಾಂತಿಯ ಪರಿಣಾಮವಾಗಿಯೇ ಲೋಕದಲ್ಲಿ ಕಾನೂನಿನ ಆಡಳಿತ ಜಾರಿಯಾಯಿತು. ಸಾಮಾಜಿಕ ಅಸಮಾನತೆ ಮತ್ತು ಸಾಮಾಜಿಕ ಅನ್ಯಾಯವನ್ನು ಸಮರ್ಥಿಸುವ ತತ್ವಗಳೆಲ್ಲವೂ ಲೋಕದಿಂದ ಕೊನೆಗೊಂಡಿತು.

ಈ ಐತಿಹಾಸಿಕ ಬೆಳವಣಿಗೆ ಎಷ್ಟು ಪ್ರಭಾವಪೂರ್ಣವಾಯಿತೆಂದರೆ ತಲೆತಿರುಕನಾದ ಯಾರಾದರೊಬ್ಬ ಮತ್ತೊಮ್ಮೆ ಯಾವುದೇ ಪಕ್ಷಪಾತದ ಸಿದ್ಧಾಂತದೊಂದಿಗೆ ಎದ್ದು ನಿಂತರೆ ಸ್ವತಃ ನಾಮಾವಶೇಷವಾಗಿ ಬಿಡುತ್ತಾನೆ.

ಆಧುನಿಕ ಕಾಲದಲ್ಲಿ ಇದಕ್ಕೆ ಹಿಟ್ಲರ್ (ಕ್ರಿ.ಶ. 1889-1945)ನ ಉದಾಹರಣೆಯನ್ನು ಕೊಡಬಹುದಾಗಿದೆ. ಅವನ ಪ್ರಕಾರ ಜರ್ಮನ್ ಸಮುದಾಯ ಅತ್ಯಂತ ಉನ್ನತ(Greatest) ಸಮುದಾಯವಾಗಿತ್ತು. ಇತರೆಲ್ಲ ಸಮುದಾಯಗಳನ್ನು ಆಳುವುದು ಜರ್ಮನ್ನರ ಜನ್ಮಸಿದ್ಧ ಹಕ್ಕು ಎಂದು ಅವನು ಹೇಳಿದ್ದನು. ಜನಾಂಗಗಳು ಮತ್ತು ವ್ಯಕ್ತಿಗಳ ನಡುವೆ ಇರುವ ಭೇದ ಬದಲಿಸಲಾಗದ ಸಹಜ ವ್ಯವಸ್ಥೆಯಾಗಿದೆ ಎಂಬುದು ಅವನ ಭಾವನೆಯಾಗಿತ್ತು. ಆರ್ಯ ಮೂಲದ ಜನಾಂಗ ಮಾತ್ರ ಮಾನವಕುಲದ ರಚನಾತ್ಮಕ ಶಕ್ತಿಯಾಗಿದೆ ಎಂದು ಅವನು ಸಾರಿದನು.

ಆದರೆ ಹಿಟ್ಲರ್‌ನ ಪರಿಣಾಮವೇನಾಯಿತು. ಅವನು ತಾತ್ಕಾಲಿಕವಾಗಿ ಯುರೋಪಿನಲ್ಲಿ ಬೆಳಗಿದನು. ಆದರೆ ಕಟ್ಟಕಡೆಗೆ ಅವನು ತನ್ನ ರಾಷ್ಟ್ರದಲ್ಲೇ ಒಬ್ಬಂಟಿಯಾಗಿ ಬಿಟ್ಟನು. ಹತಾಶನಾಗಿ ಬರ್ಲಿನ್‌ನ ಬಂಕರ್‌ವೊಂದರಲ್ಲಿ ಅವನು

ಆತ್ಮಹತ್ಯೆ ಮಾಡಿಕೊಂಡನು. ಅದರೊಂದಿಗೆ ಅವನು ತಂದಂತಹ ನಾಝಿ ಚಳವಳಿಯೂ ಅಂತ್ಯವಾಯಿತು.

ಪ್ರವಾದಿವರ್ಯರು(ಸ) ತಂದಂತಹ ಸಾಮಾಜಿಕ ಕ್ರಾಂತಿಯು ಮುಸ್ಲಿಮ್ ಜನಾಂಗಗಳ ಮೇಲೆ ನೇರವಾದ ಪರಿಣಾಮ ಬೀರುತ್ತಿದ್ದರೆ, ಪರೋಕ್ಷವಾಗಿ ಅದು ಸಮಸ್ತ ಮಾನವ ಜಗತ್ತನ್ನೇ ಪ್ರಭಾವಿತಗೊಳಿಸುತ್ತಿದೆ.

## ಸೈದ್ಧಾಂತಿಕ ಮತ್ತು ವ್ಯಾವಹಾರಿಕ ಬುನಾದಿಗಳು

ಸಾಮಾಜಿಕ ನ್ಯಾಯ ಅಥವಾ ಸಮಾನ ನ್ಯಾಯದ(Equal Justice) ಉದ್ದೇಶ ವಾಸ್ತವಿಕ ಸ್ವರೂಪದಲ್ಲಿ ಯಾವುದೇ ವ್ಯವಸ್ಥೆಯ ಮೂಲಕ ಸಾಧಿತವಾಗಿದ್ದರೆ ಅದು ಇಸ್ಲಾಮಿನಿಂದ ಮಾತ್ರ ಎಂದು ಸಂಶೋಧಕರು ಸಮ್ಮತಿಸಿದ್ದಾರೆ. ಈ ನಿಟ್ಟಿನಲ್ಲಿ ನಾವು ಆರಂಭದಲ್ಲಿ ಉಲ್ಲೇಖಿಸಿರುವ ಸ್ವಾಮಿ ವಿವೇಕಾನಂದರ ಹೇಳಿಕೆಯೂ ಒಂದಾಗಿದೆ. ಈ ಮಾನವೀಯ ಉದ್ದೇಶವನ್ನು ಈಡೇರಿಸುವಲ್ಲಿ ಇಸ್ಲಾಮ್ ಮಾತ್ರ ಸಫಲವಾಗಲು ಕಾರಣವೇನು? ಇತರ ಧರ್ಮ ಅಥವಾ ವ್ಯವಸ್ಥೆಗೆ ಈ ಉದ್ದೇಶವನ್ನು ಸಾಧಿಸಲು ಯಾಕೆ ಸಾಧ್ಯವಾಗಲಿಲ್ಲ ಎಂಬ ಪ್ರಶ್ನೆ ಉದ್ಭವಿಸುವುದು ಸಹಜ. ಇದಕ್ಕೆ ಮುಖ್ಯವಾಗಿ ಎರಡು ಕಾರಣಗಳಿವೆ. ಎರಡನ್ನೂ ಸ್ಪಷ್ಟಪಡಿಸಲು ನಾವು ಹಿಂದೂ ಧರ್ಮ ಮತ್ತು ಕ್ರೈಸ್ತ ಧರ್ಮದ ಉದಾಹರಣೆಯನ್ನು ಮುಂದಿಡುತ್ತೇವೆ.

ಇಸ್ಲಾಮಿನಲ್ಲಿ ಮಾನವೀಯ ಭ್ರಾತೃತ್ವದ ಪರವಾದ ಒಂದು ಸಮಗ್ರ ಸಿದ್ಧಾಂತವೇ ಇದೆ. ಆದರೆ ಇತರ ಯಾವುದೇ ವ್ಯವಸ್ಥೆಯಲ್ಲಿ ಇಂತಹ ಸಿದ್ಧಾಂತ ಅಸ್ತಿತ್ವದಲ್ಲಿಲ್ಲ. ಉದಾಹರಣೆಗೆ, ಹಿಂದೂ ಧರ್ಮವನ್ನು ತೆಗೆದುಕೊಳ್ಳಿ. ಅದರ ಮೂಲಭೂತ ವಿಶ್ವಾಸದ ಆಧಾರದಲ್ಲೇ ಮಾನವ ಕುಲವನ್ನು ಎರಡು ವಿಭಾಗ ಗಳಲ್ಲಿ ವಿಂಗಡಿಸಲಾಗಿದೆ. ಮಾನವನ ಒಂದು ವಿಭಾಗಕ್ಕೆ ಉನ್ನತ ಸ್ಥಾನಮಾನ ಲಭ್ಯವಾಗಬೇಕು ಮತ್ತು ಇನ್ನೊಂದು ವಿಭಾಗವನ್ನು ಕೆಳದರ್ಜೆಯವರೆಂದು ಪರಿಗಣಿಸಬೇಕೆಂಬುದು ಅದರ ತತ್ವಶಾಸ್ತ್ರದ ಬೇಡಿಕೆಯಾಗಿದೆ. ಈ ವಿಶ್ವಾಸದ ಆಧಾರದಲ್ಲಿ ಎರಡೂ ವಿಭಾಗದವರೊಂದಿಗೆ ಸಮಾನವಾಗಿ ವ್ಯವಹರಿಸಲು ಸಾಧ್ಯವಿಲ್ಲ. ಈ ವಿಶ್ವಾಸವನ್ನು ಅಂಗೀಕರಿಸಿದವರು, ಕೆಳದರ್ಜೆಯವರನ್ನು ತಮಗೆ ಸಮಾನರಾದವರೆಂದು ಪರಿಗಣಿಸಲು ಎಂದೂ ಸಾಧ್ಯವಿಲ್ಲ.

1953ರಲ್ಲಿ ಭಾರತದ ರಾಷ್ಟ್ರಪತಿಯವರು ಹಿಂದುಳಿದ ವರ್ಗಗಳ ಆಯೋಗ (Backward Classes Commission) ರಚಿಸಿದ್ದನ್ನು ನಾನು ಈ ಸಂದರ್ಭದಲ್ಲಿ ನೆನಪಿಸ ಬಯಸುತ್ತೇನೆ. ಕಾಕಾ ಸಾಹೆಬ್ ಕಾಲೇಲ್ಕರ್ ಅದರ ಅಧ್ಯಕ್ಷರಾಗಿದ್ದರು. ಪ್ರಸ್ತುತ ಆಯೋಗ ಸುದೀರ್ಘವಾದ ಸಮೀಕ್ಷೆ ನಡೆಸಿದ ನಂತರ 1955ರಲ್ಲಿ ತನ್ನ 262 ಪುಟಗಳ ವರದಿಯನ್ನು ಸಲ್ಲಿಸಿತು. ಸರಕಾರಿ ಮಾಧ್ಯಮಗಳ ಮೂಲಕ ಅದು 1956ರಲ್ಲಿ ಪ್ರಕಟವಾಯಿತು. ಈ ಪ್ರಕಟಿತ ವರದಿ ದೆಹಲಿಯ ಪಬ್ಲಿಕ್ ಲೈಬ್ರೆರಿಯಲ್ಲಿದೆ. ಅಲ್ಲೇ ನಾನು ಅದನ್ನು ಓದಿದ್ದೆ.

ವರದಿಯ ಪ್ರಕಾರ- ಭಾರತದಲ್ಲಿರುವ ಜಾತಿಪದ್ಧತಿ ಲೋಕದ ಇತರ ಭಾಗಗಳಲ್ಲಿರುವುದಕ್ಕಿಂತ ಸಂಪೂರ್ಣ ಭಿನ್ನವಾದುದಾಗಿದೆ. ಸಾಮಾನ್ಯವಾಗಿ ಭಾವಿಸಲಾಗುವಂತೆ ಇದು ಕೇವಲ ಆರ್ಥಿಕ ಕಾರಣಗಳಿಂದಾಗಿ ಹುಟ್ಟಿಕೊಂಡಿಲ್ಲ. ಬದಲಾಗಿ ಇದರ ಕಾರಣಗಳು ಅತ್ಯಂತ ಆಳವಾಗಿವೆ. ಅದರ ಬೇರುಗಳು ಭಾರತದ ಆರ್ಥಿಕ ವ್ಯವಸ್ಥೆಯಲ್ಲಿ ಕಂಡು ಬರುತ್ತವೆ. ಸಾಮಾಜಿಕ ಅಸಮಾನತೆಯನ್ನು ಮಾನವನ ಪ್ರಕೃತಿಯೊಂದಿಗೆ ಶಾಮೀಲುಗೊಳಿಸಿರುವುದು ಭಾರತದ ವೈಶಿಷ್ಟ್ಯ. ಧಾರ್ಮಿಕ ಮತ್ತು ಆಧ್ಯಾತ್ಮಿಕ ಹಿನ್ನೆಲೆಯೊಂದಿಗೆ ಅದಕ್ಕೆ ಒಂದು ಸಾಂಸ್ಥಿಕ ರೂಪ ಕೊಡಲಾಗಿದೆ ಎಂದು ಅವರು ಬರೆದಿದ್ದಾರೆ.

"It is the peculiarity of India that it recognised the Social differences inherent in human nature and gave them on institutional and mystic form with a religious and spiritual background." (P-14)

ಕಾಲೇಲ್ಕರ್ ಕಮೀಷನ್‌ನ ವರದಿಯಲ್ಲಿ ಹೇಳಲಾಗಿರುವ ಈ ಮಾತು ವಸ್ತುಸ್ಥಿತಿಯಾಗಿದೆ. ಉಚ್ಚ ನೀಚತೆ ಹುಟ್ಟಿನಿಂದಾಗಿಯೇ ಆಗುವ ಅಂತರ ಎಂಬ ಕಲ್ಪನೆಯನ್ನು ಭಾರತದಲ್ಲಿ ನೀಡಲಾಗಿದೆ. ಈ ಕಲ್ಪನೆಯ ಪ್ರಕಾರ ಉಚ್ಚನೀಚತೆಯು ಒಂದು ಸ್ವಾಭಾವಿಕವಾದ ಮತ್ತು ಅನಿವಾರ್ಯವಾದ ವಾಸ್ತವಿಕತೆಯಾಗಿದೆ. ಇಂತಹ ವಿಶ್ವಾಸ ನೆಲೆಯೂರಿರುವ ಸಮಾಜದಲ್ಲಿ ಸಾಮಾಜಿಕ ಅಂತರವನ್ನು ನೀಗಿಸಲು ಅಥವಾ ಸಮಾನ ನ್ಯಾಯವನ್ನು ನೀಡುವ ಮನೋಭಾವವೇ ಬೆಳೆಯಲು ಸಾಧ್ಯವಿಲ್ಲ.

ಈ ನಿಟ್ಟಿನಲ್ಲಿರುವ ಇನ್ನೊಂದು ಅಡಚಣೆ ಕ್ರೈಸ್ತ ಧರ್ಮದ ವ್ಯವಸ್ಥೆಯಲ್ಲಿ ಕಂಡು ಬರುತ್ತದೆ. ಟೈಮ್ಸ್ ಆಫ್ ಇಂಡಿಯಾದ ಭಾನುವಾರದ ಸಂಚಿಕೆ(22 ಡಿಸೆಂಬರ್ 1991)ಯಲ್ಲಿ ಪ್ರಕಟವಾಗಿದ್ದ ಒಂದು ವರದಿಯನ್ನು ನಾನಿಲ್ಲಿ ಉಲ್ಲೇಖಿಸಬಯಸುತ್ತೇನೆ. ಐದು ಮಂದಿ ಕ್ರೈಸ್ತ ಪತ್ರಕರ್ತರ ನಿಯೋಗ ಈ ವರದಿಯನ್ನು ಸಿದ್ಧಪಡಿಸಿದೆ. ವರದಿಯ ಪ್ರಕಾರ, ಭಾರತದಲ್ಲಿರುವ ಕ್ರೈಸ್ತರಲ್ಲಿ ಶೇ. 50ಕ್ಕಿಂತ ಹೆಚ್ಚಿನವರು ಹಿಂದುಳಿದ ವರ್ಗಕ್ಕೆ ಸೇರಿದವರಾಗಿದ್ದಾರೆ. ಅವರನ್ನು ದಲಿತ ಕ್ರೈಸ್ತರು(Dalit Christians) ಎನ್ನಲಾಗುತ್ತದೆ. ಈಗಲೂ ಚರ್ಚ್‌ನ ಕಡೆಯಿಂದ ಅವರ ಬಗ್ಗೆ ಪಕ್ಷಪಾತಿ ಧೋರಣೆಯನ್ನೇ ತಳೆಯಲಾಗುತ್ತಿದೆ.

"-those who came over from the backward Hindu strata still find themselves hogged down indiscrimination from the church."

ದಲಿತ ಕ್ರೈಸ್ತರ ಮೃತದೇಹವನ್ನು 'ಉನ್ನತ ಜಾತಿಯ ಕ್ರೈಸ್ತರ' ಸ್ಮಶಾನದಲ್ಲಿ ಹೂಳುವಂತಿಲ್ಲ. ಅವರು ಉನ್ನತ ಜಾತಿಯ ಕ್ರೈಸ್ತರನ್ನು ವರಿಸುವಂತಿಲ್ಲ. ಚರ್ಚ್‌ನಲ್ಲಿ ಅವರಿಗಾಗಿ ಪ್ರತ್ಯೇಕ ಪ್ರಾರ್ಥನಾ ಸಭೆ ನಡೆಯುತ್ತದೆ. ಕೇರಳದಲ್ಲಿ ಕ್ರೈಸ್ತ ಧರ್ಮ ಎರಡು ಸಾವಿರ ವರ್ಷಗಳಿಂದಿದೆ. ಆದರೆ ಈಗಲೂ ಅವರಲ್ಲಿ ಈ ವ್ಯತ್ಯಾಸ ಕಂಡು ಬರುತ್ತದೆ. ಸಮಾನ ಸ್ಥಾನಮಾನ ದೊರೆಯದ್ದರಿಂದ ದಲಿತ ಕ್ರೈಸ್ತರು ಅತ್ಯಂತ ಖಿನ್ನರಾಗಿದ್ದಾರೆ. ಆದ್ದರಿಂದ ಈ ತನಕ ಸುಮಾರು ಆರು ಸಾವಿರ ಮಂದಿ ಕ್ರೈಸ್ತರು ತಮ್ಮ ಧರ್ಮ ಬಿಟ್ಟು ಇತರ ಧರ್ಮಗಳನ್ನು ಅವಲಂಬಿಸಿದ್ದಾರೆ.

ಮದ್ರಾಸ್‌ನ ಕ್ಯಾಥೋಲಿಕ್ ಆರ್ಚ್ ಬಿಷಪ್(Dr. Casmur Guanadickman)ರೊಂದಿಗೆ ಈ ನಿಟ್ಟಿನಲ್ಲಿ ಪ್ರಶ್ನೆ ಕೇಳಲಾಯಿತು. ಚರ್ಚ್‌ನ ವ್ಯವಸ್ಥೆಯಲ್ಲಿ ಬಲವಾದ ಜಾತಿ ಪದ್ಧತಿ (Strong Caste System) ಇದೆ ಎಂದು ಅವರು ಸಮ್ಮತಿಸಿದರು. ಇದೊಂದು ಪ್ರತಿಕೂಲ ಹೆಜ್ಜೆ ಎಂಬುದನ್ನು ನಾನು ಬಲ್ಲೆ. ಆದರೆ ಕೆಲವೊಮ್ಮೆ ವಾಸ್ತವಿಕತೆಯನ್ನು ಮುರಿಯಲು ವಿಶ್ವಾಸದ ಬಲ ಅಸಮರ್ಥವಾಗುತ್ತದೆ ಎಂದು ಅವರು ಹೇಳಿದರು.

"I agree, it was a retrogade step. But sometimes the power of faith cannot break reality."

ಕ್ರೈಸ್ತರ ವಿಶ್ವಾಸ ಅಸಮಾನತೆಯನ್ನು ಬೋಧಿಸುವುದಿಲ್ಲ. ಆದರೆ ಅವರ ವಿಶ್ವಾಸದ ಹಿಂದೆ ಸಮಾನತೆಯ ಯಾವುದೇ ಪ್ರಬಲ ಐತಿಹಾಸಿಕವಾದ ಮಾದರಿಗಳು

ಲಭ್ಯವಿಲ್ಲ. ಇದು ಅವರ ಕೊರತೆಯಾಗಿದೆ. ಸಂದೇಶ ಪ್ರಚಾರ ಮಾಡುತ್ತಿದ್ದಾಗಲೇ ಏಸುಕ್ರಿಸ್ತರ ದೌತ್ಯ ಕೊನೆಗೊಂಡಿತು. ಪ್ರಾಯೋಗಿಕವಾದ ಕ್ರಾಂತಿಯ ಹಂತಕ್ಕೆ ಅದು ತಲುಪಲಿಲ್ಲ. ಆದ್ದರಿಂದ ಕ್ರೈಸ್ತ ಧರ್ಮದ ಆರಂಭ ಕಾಲದಲ್ಲಿ ಸಮಾನತೆಯ ಅತ್ಯಂತ ಪ್ರಬಲವಾದ ಪ್ರಾಯೋಗಿಕ ಮಾದರಿ ಸ್ಥಾಪನೆಗೊಳ್ಳಲಿಲ್ಲ. ಇಂತಹ ಪರಿಸ್ಥಿತಿಯಲ್ಲಿ ಕೇವಲ ವಿಶ್ವಾಸದ ಆಧಾರದಲ್ಲಿ ವ್ಯಾವಹಾರಿಕ ಬದಲಾವಣೆಯನ್ನು ತರಲು ಸಾಧ್ಯವಿಲ್ಲ.

ಇಸ್ಲಾಮ್, ಪ್ರಸ್ತುತ ಎರಡು ವ್ಯವಸ್ಥೆಗಳಿಗಿಂತಲೂ ಭಿನ್ನವಾಗಿದೆ. ಅದರ ಬಳಿ ಸಮಾನತೆ ಮತ್ತು ಸಮಾನ ವ್ಯವಹಾರಕ್ಕೆ ಪರವಾದ ಸಮಗ್ರ ಸಿದ್ಧಾಂತವಿದೆ. ಜತೆಗೆ ಪರಿಪೂರ್ಣವಾದ ಮತ್ತು ಅತ್ಯಂತ ಆದರ್ಶಪ್ರಾಯವಾದ ಪ್ರಾಯೋಗಿಕ ಮಾದರಿಯು ಅದರ ಬಳಿ ಇದೆ. ಇಸ್ಲಾಮಿನ ಆರಂಭ ಕಾಲದ ಚರಿತ್ರೆಯಲ್ಲಿ ಈ ಎರಡೂ ವಿಷಯಗಳನ್ನು ಕಾಣಬಹುದಾಗಿದೆ. ಅದು ಇಸ್ಲಾಮಿ ಇತಿಹಾಸಕ್ಕೆ ಶಾಶ್ವತವಾದ ಒಂದು ದಿಸೆಯನ್ನು ನೀಡಿದೆ. ಇಸ್ಲಾಮಿ ಚರಿತ್ರೆ ಈಗ ಆ ದಿಕ್ಕಿನಲ್ಲೇ ಸಾಗಬೇಕಾಗಿದೆ. ಇಸ್ಲಾಮಿ ಚರಿತ್ರೆಯ ಈ ದಿಸೆಯನ್ನು ಬದಲಿಸಬಲ್ಲಂತಹ ಬೇರಾವುದೇ ಪ್ರಬಲವಾದ ದಿಕ್ಕು ಈಗ ಅಸ್ತಿತ್ವದಲ್ಲಿಲ್ಲ.

ಇಸ್ಲಾಮಿನ ಈ ವಿಶೇಷತೆ ಸಕಲ ಮಾನವರ ಪಾಲಿಗೆ ಅನುಗ್ರಹವಾಗಿ ಪರಿಣಮಿಸಿದೆ. ಅದು ಎಲ್ಲಾ ಜನಾಂಗಗಳ ಪಾಲಿಗೂ ಆಶಾಕಿರಣವಾಗಿದೆ. ಧರ್ಮೇತರ ವಾದ ಜಾತ್ಯತೀತ ವಿಷಯಗಳಿಗೆ ಸಂಬಂಧಿಸಿದಂತೆ ಸಾಮಾನ್ಯವಾಗಿ ತಳೆಯಲಾಗುವ ನಿಷ್ಪಕ್ಷಪಾತಿ ದೃಷ್ಟಿಕೋನದಿಂದ ನೋಡಿದರೆ ಇಸ್ಲಾಮಿನ ಹೆಸರಲ್ಲಿ ಜಗದೊಡೆಯನ ದಿವ್ಯಾನುಗ್ರಹ ಸಕಲ ಮಾನವರ ಪಾಲಿಗೆ ಉಪಲಬ್ಧವಿರುವುದು ಗೋಚರಿಸುತ್ತದೆ.

ಇಸ್ಲಾಮ್ ಯಾವುದೇ ಗುಂಪಿನ ಜನಾಂಗೀಯ ಪರಂಪರೆಯಲ್ಲ. ಇತರ ಧರ್ಮಗಳಿಗಿಂತ ಭಿನ್ನವಾದ ಒಂದು ಅನುಪಮ ಧರ್ಮವೂ ಅಲ್ಲ. ಅದು ಪೂರ್ವ ಧರ್ಮಗಳ ಒಂದು ಸುರಕ್ಷಿತ ಮತ್ತು ನಂಬಲರ್ಹವಾದ ರೂಪವಾಗಿದೆ. ಅದು ಪ್ರತಿಯೊಬ್ಬನ ಸಹಜ ಪ್ರಕೃತಿಯ ಕರೆಯಾಗಿದೆ. ಈ ದೃಷ್ಟಿಕೋನದಿಂದ ನೋಡಿದರೆ ಪ್ರತಿಯೊಬ್ಬ ವ್ಯಕ್ತಿಗೂ ಇಸ್ಲಾಮ್ ಅವನ ಪಾಲಿನ ಆಸ್ತಿಯಂತೆ ಕಂಡು ಬರುವುದು. ಇಸ್ಲಾಮನ್ನು ಪಡೆಯುವುದು ಅವನ ಪಾಲಿಗೆ ಕಳೆದು ಹೋಗಿದ್ದ ತನ್ನದೇ ಆದ ಒಂದು ಯಾವುದೋ ವಸ್ತುವನ್ನು ಮತ್ತೆ ಪಡೆದುಕೊಂಡಂತಾಗುವುದು.

❖ ❖ ❖